ಈ ಸಂಚಿಕೆಯಲ್ಲಿ



# ಶೂದ್ರ

ಜನವರಿ 1981

ಬೆಲೆ ರೂ. 1-25



# ಶೂದ್ರ

ಸಂಪುಟ : 6
ಸಂಚಿಕೆ : 3
ಜನವರಿ 1981





ಮುಖಪುಟದ ಕಲಾವಿದ :
ಕೆ.ಆರ್. ಸುಬ್ಬಣ್ಣ



ಶೂದ್ರ ಶ್ರೀನಿವಾಸ್,
ಸುದ್ದುಗುಂಟೇಪಾಳ್ಯ,
ಡಿ.ಆರ್. ಕಾಲೇಜ್ ಪೋಸ್ಟ್
ಬೆಂಗಳೂರು-560 029.



ಓದಿ :

ಅಂಕಣ (ದ್ವೈಮಾಸಿಕ)

ಋಜುವಾತು (ತ್ರೈಮಾಸಿಕ )



ಗೆ॥ ಎಸ್. ವೆಂಕಟರಾಮ್ ಇನ್ನಿಲ್ಲ.

ತೀರಾ ದುಗುಡದಿಂದ ವೇದನೆಯಿಂದ ಬರೆಯುತ್ತಿದ್ದೇವೆ. ಇದು ನಂಬಲಾಗದ ಸಂಗತಿ. ನಾವು ಕೆಲವು ದಿನಗಳ ಹಿಂದೆ ವೆಂಕಟರಾಮ್ ಜೊತೆಗೆ ಚರ್ಚಿಸಿ ಭಾರೀ ಭಾರೀ ಯೋಜನೆಗಳನ್ನು ಹಾಕಿ ಕೊಂಡಿದ್ದೆವು. ಸಾವಿನ ಸುಳಿವು ಸಹ ಆಗ ಇರಲಿಲ್ಲ.

ಕರ್ನಾಟಕದ ಏಕೈಕ ಪ್ರಜ್ಞಾವಂತ ರಾಜಕಾರಣಿ, ಸಂಸ್ಕೃತಿ, ಸಾಹಿತ್ಯದ ಜೊತೆಗೆ ನಿರಂತರ ಸಂಪರ್ಕ ಹೊಂದಿದ್ದ ದುಡಿವ ವರ್ಗದ ನಾಯಕ ವಿಧಾನಪರಿಷತ್ ಸದಸ್ಯ ವೆಂಕಟರಾಮ್ ಇನ್ನಿಲ್ಲ.

ನಮಗೆ ಬರೆದು ತೀರಿಸಿಕೊಳ್ಳಲು ಸಾಧ್ಯವಾಗುವ ನೋವಿದಲ್ಲ.

ಈ ಸಂಕಟದ ನಡುವೆ, ವೆಂಕಟರಾಮ್ ಕನಸುಗಳು ಸಾಯದಿರಲಿ.

ಮುಂದಿನ ಸಂಚಿಕೆ ವಿಶೇಷ :
ಗೆ॥ ವೆಂಕಟರಾಮ್ ಬರೆದ ಲೇಖನ, ಸಂಪಾದಕರ ದೆಹಲಿ ವರದಿ.

**ಈ ಸಂಚಿಕೆಯಿಂದ ಶೂದ್ರದ ವಾರ್ಷಿಕ ಚಂದಾ 15 ರೂ.ಗಳು ದಯವಿಟ್ಟು ಸಹಕರಿಸಿ**

# ಚಪ್ಪಲಿ

(ಪಾಕಿಸ್ಥಾನೀಕಥೆ) ಮೂಲ : ಅಹಮದ್ ನದೀಮ ಕಾಸಮಿ

ಕರಮು ಕವ್ವಾಲಿ ಪಾರ್ಟಿಯೊಂದರಲ್ಲಿ ಎಷ್ಟೋ ವರ್ಷ ಚಪ್ಪಾಳೆ ತಟ್ಟಿ ತಾಳ ಹಾಕಿದ. ಬರಬರುತ್ತಾ ಹಾಡಲೂ ಕಲಿತ, ಹಿಂದಿನಿಂದ ಮುಂಗಾಗಡೆ ಒಂದು ದೊಡ್ಡ ಕವ್ವಾಲನ ಜೊತೆ ಮುಂಡಿಯೂರಿ ಕುಳಿತುಕೊಳ್ಳತೊಡಗಿದ. ತನಗಿಂತ ಮುಂದೆ ಹೋದಾನೆಂದು ಆತಂಕಿತನಾದ ದೊಡ್ಡ ಕವ್ವಾಲ ಈತನನ್ನು ಮನೆಗೆ ಕಳಿಸಿದ. ಕರಮುನ ಕಂಠ ಕವ್ವಾಲಿಗಾಗಿ ಹೇಳಿ ಮಾಡಿಸಿದಂತಿತ್ತು. ಮೇಲಾಗಿ ಕವ್ವಾಲಿಯ ಸೂಕ್ಷ್ಮವನ್ನೆಲ್ಲ ಬಲ್ಲವನಾದ್ದರಿಂದ ಹಾರ್ಮೋನಿಯಮ್ಮಿನ ಧ್ವನಿಯಲ್ಲಿ ತನ್ನ ಧ್ವನಿಯನ್ನು ಅಡಗಿಸಿಕೊಳ್ಳುವ ಪ್ರಾವೀಣ್ಯ ಪಡೆದಿದ್ದ, ಆತ ತನ್ನದೇ ಕವ್ವಾಲಿ ಪಾರ್ಟಿ ಕಟ್ಟಿದ. ಜಾತ್ರೆ, ಮದುವೆ-ಮುಂಜಿವೆಗಳಲ್ಲಿ ಹಾಡತೊಡಗಿದ. ತನ್ನ ಮೂವರು ಮಕ್ಕಳ ವಿದ್ಯಾಭ್ಯಾಸದತ್ತಲೂ ಗಮನವಿರಿಸಿದ. ಹಾಗೆಲ್ಲ ದೊಡ್ಡ ಕವ್ವಾಲನೊಂದಿಗೆ ದೊಡ್ಡ ಪಟ್ಟಣಗಳಿಗೆ ಹೋಗುವ ಅವಕಾಶ ಲಭಿಸಿತ್ತು. ತನ್ನ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡದಿದ್ದರೆ ಅವರು ತನ್ನ ಹಾಗೆ, ತನ್ನ ಪೂರ್ವಜರ ಹಾಗೆ, ಡೋಲು ಬಾರಿಸಬೇಕಾಗುವುದು, ಶಹನಾಯಿ ಊದಬೇಕಾಗುವುದು, ಕವ್ವಾಲನ ಹಿಂದೆ ಚಪ್ಪಾಳೆ ತಟ್ಟುತ್ತ ತಿರುಗಬೇಕಾಗುವುದು. ಮುಂದೆ ಅವರ ಮಕ್ಕಳೂ ಸಹ ಖಂಡಿತ ಹಿಂದುಳಿಯಬೇಕಾಗುವುದು ಎಂಬುದನ್ನೂ ಆತ ಅರಿತುಕೊಂಡಿದ್ದ.

ತನ್ನ ಮೂವರು ಮಕ್ಕಳನ್ನು ಶಾಲೆಗೆ ಕಳಿಸಿದಾಗ ಪೂರ್ತಿ ಹಳ್ಳಿಗೆ ದಂಗುಬಡಿದಂತಾಯಿತು. ಹಜರತ್ ಆದಮ್ ಸ್ವರ್ಗದಿಂದ ಭೂಮಿಗಿಳಿದು ಬಂದಾಗಿನಿಂದ ಇಲ್ಲಿಯವರೆಗೆ ತನ್ನ ಮಕ್ಕಳನ್ನು ಓದಿಸುವುದರ ಬಗ್ಗೆ ಯೋಚಿಸಿದ ಮೊದಲ ಮಿರಾಸಿ (ಭಜಂತ್ರಿ) ಈತ ಎಂದು ಜನರು ಅಂದುಕೊಂಡರು. ಚೌಧರಿ ಕರಮುನನ್ನು ಮನೆಗೆ ಕರೆಯಿಸಿ, "ನಾಚಿಕೆ ಬರುವುದಿಲ್ಲವೆ ಕರಮು ? ಒಬ್ಬ ಮಿರಾಸಿಯಾಗಿ ನಿನ್ನ ಮಕ್ಕಳನ್ನು ಓದಿಸುವಿಯಾ ? ಮದುವೆಯಲ್ಲಿ ಜನರೇನು ಇವರು ಡೋಲು ಶಹನಾಯಿ ಬಾರಿಸುವುದರ ಬದಲು ಪುಸ್ತಕ ಓದುವದನ್ನು ಕೇಳಬೇಕೆ ? ಯಾಕೆ ಇವರನ್ನು ಹಾಳುಮಾಡುವಿ ? ಅದ್ಯಾಕೆ ಪರಂಪರಾಗತ ವೃತ್ತಿಯನ್ನು ನಿಲ್ಲಿಸಿಬಿಡುವಿ ?" ಎಂದು ಬೆದರಿಕೆ ಹಾಕಿದ.

ಇದನ್ನೆಲ್ಲ ಕೇಳಿದ ಕರಮು ಸುಮ್ಮನಾದ, ಆದರೂ ಮುಗುಳ್ನಕ್ಕ. ಇನ್ನೇನಾದರೂ ಬೊಗಳು ನೋಡುವಾ ? ಎಂದು ಚೌಧರಿ ಮತ್ತೆ ಬೆದರಿಸಿದಾಗ ಕರಮು ಹೇಳಿದ: "ಯಜಮಾನರೆ, ಆಯುಷ್ಯವಿಡೀ ಬೇಳೆ ಕಾಯಿಪಲ್ಲೆ ತಿಂದವನಿಗೆ ಯಾವಾಗಲಾದರೊಮ್ಮೆ ಕೋಳಿಯ ಸಾರಿನರುಚಿ ನೋಡಬೇಕು ಎಂದು ಅನ್ನಿಸುವುದು ಸಹಜ !"

ಕರಮು ಕವ್ವಾಲಿಯ ಹೆಸರಿನಲ್ಲಿ ಕೂಗಾಡಿ ದುಡ್ಡಿಗೆ ದುಡ್ಡು ಸೇರಿಸಿ ಮಕ್ಕಳನ್ನು ಓದಿಸಿದ. ಬೇಸಿಗೆಯ ರಜೆಯಲ್ಲಿ ಮಕ್ಕಳು ಹಳ್ಳಿಗೆ ಬಂದಾಗ ತಾವು ಮಿರಾಸಿಯ ಮಕ್ಕಳು ಎಂದು ಕರೆಯಿಸಿಕೊಳ್ಳಲು ಕಿಂಚಿತ್ತೂ ನಾಚಿಕೊಳ್ಳುತ್ತಿರಲಿಲ್ಲ98ತಾದರು. "ನಾವು ಕರಮುನ ಮಕ್ಕಳು, ಸರಿ. ಆದರೆ ನಮ್ಮ ವಂಶವೂ ಚೌಧರಿಯ ವಂಶದಂತೆ ಹಜರತ್ ಆದಮ್‌ನೊಂದಿಗೆ ಸಂಬಂಧ ಹೊಂದಿದೆ." ಎಂದಿಷ್ಟೇ ಹೇಳುತ್ತಿದ್ದರು.

ಈ ಹುಡುಗರಿಗೆ ಲಾಹೋರ, ಕಾಲಾಶಾಹಕಾತು, ಫೈಸಲಾಬಾದಿನ ಮಿಲ್ಲುಗಳಲ್ಲಿ ಕೆಲಸ ಸಿಕ್ಕಿತು. ಕರಮು ತನ್ನ ಕವ್ವಾಲಿ ಪಾರ್ಟಿ ಬಿಟ್ಟು ಹಳ್ಳಿಯಲ್ಲಿ ನೆಮ್ಮದಿಯಿಂದ ಬದುಕಲು ಸಾಕಾಗುವಷ್ಟು ಹಣ ಪ್ರತಿ ತಿಂಗಳು ಕಳಿಸಹತ್ತಿದರು. ಆತ ಸ್ವಚ್ಛ ಅರಿವೆ ತೊಡಲಾರಂಭಿಸಿದ. ಭಿಕ್ಷೆ ನೀಡಲಾರಂಭಿಸಿದ ಒಂದು ವರ್ಷವಂತೂ ಜಕಾತ್ (ಧಾರ್ಮಿಕ ದಾನ) ಕೂಡ ಕೊಟ್ಟ. ಇದನ್ನು ಕೇಳಿ ಚೌಧರಿ ಕಣ್ಣಲ್ಲಿ ನೀರು ಬರುವ ಹಾಗೆ ನಕ್ಕು ಬಿಟ್ಟ. "ಸೂಳೆಯ ಮಗ ! ಇದೋ ನೋಡಿ ವರ್ಷ ಎರಡು ವರ್ಷಗಳಲ್ಲಿ ಸ್ವತಃ ಜಕಾತ್ ಬೇಡಲು ಬರುವನು...... ಒಂದು ವೇಳೆ ಕಯಾಮತ್ (ಪ್ರಳಯ) ಆಗದಿದ್ದರೆ ! ಒಬ್ಬ ಮಿರಾಸಿ ಜಕಾತ್ ಕೊಡುತ್ತಾನೆಂದರೆ ಮಟ ಮಟ ಮಧ್ಯಾಹ್ನ ಸೂರ್ಯಾಸ್ತವಾದಂತೆಯೇ" ಎಂದ.

ಕರಮುನಿಗೆ ಚೌಧರಿಯ ಮಾತುಗಳನ್ನು ಆದ್ಯಾರೊ ಹೇಳಿದಾಗ, "ಚೌಧರಿ ಯಾಕೆ ಸಿಟ್ಟಿಗೇಳಬೇಕು ? ಜಕಾತ್ ಅವನಿಗಂತೂ ಕಳಿಸಿಲ್ಲ. ಅವನಿಗೂ ಕೊಡುತ್ತಿದ್ದೆ ಆದರೆ ಅವನಿನ್ನೂ ಅದಕ್ಕೆ ಪಾತ್ರನಾಗಿಲ್ಲ. ಬರುಬರುತ್ತಾ ಅದಕ್ಕೆ ಪಾತ್ರನಾದನು. ಕಾಲ ಬದಲಾಗುತ್ತದೆ." ಎಂದ.

ಚೌಧರಿ ಆಡಿದ ಮಾತುಗಳನ್ನು ಕರಮುನಿಗೆ ಹೇಳಿದವರು ಕರಮು ಆಡಿದ ಈ ಮಾತುಗಳನ್ನು ಚೌಧರಿಗೆ ತಿಳಿಸುವುದು ಅವಶ್ಯವೆಂದು ಭಾವಿಸಿದರು. ಚೌಧರಿ ಶರಬತ್ತು ಕುಡಿಯುತ್ತಲಿದ್ದ. ಈ ಮಾತುಗಳನ್ನು ಕೇಳಿದ ಕೂಡಲೇ ಆತನ ಗಂಟಲು ಕಟ್ಟಿತು. ಶರಬತ್ತು ಆತನ ಮೂಗಿನಿಂದ ಇಳಿಯತೊಡಗಿತು.

ಒಂದು ದಿನ ಕರಮು ಓಣಿಯಲ್ಲಿ ಕುಳಿತುಕೊಂಡು ಜನರೊಡನೆ ಹರಟೆ ಹೊಡೆಯುತ್ತಿದ್ದ. ಮಾತುಮಾತಿನಲ್ಲಿ, "ನಾನೊಬ್ಬ ವಿಠರಾಸಿ. ಮೂವ್ವರು ಸಾಹೇಬರ ತಂದೆಯೂ ಹೌದು. ಅದಕ್ಕೆಂತಲೇ ಈ ರೀತಿ ಓಣಿಯಲ್ಲಿ ಕುಳಿತು ಕೊಳ್ಳುವುದರ ಬದಲು ಒಂದು ಪಕ್ಕಾ ಬೈಠಕ ಮಾಡಿಸಬೇಕು ಅನ್ನಿಸುತ್ತಿದೆ. ಅಲ್ಲಿ ಪಲ್ಲಂಗವಿರಿಸಿ ಜಮಖಾನೆ ಹಾಸಬೇಕೆನಿಸಿದೆ. ನಿಮ್ಮೊಟ್ಟಿಗೆ ಕುಳಿತು ಪ್ರಪಂಚದ ಒಳ್ಳೊಳ್ಳೆಯ ಸಿಹಿಯಾದ ಮಾತುಗಳನ್ನಾಡಬೇಕೆನಿಸ್ತದೆ. ಕುಳಿತುಕೊಳ್ಳಲು ಚೌಧರಿಯ ದೊಡ್ಡಮನೆ ಇದೆಯಾದರೂ ಅಲ್ಲಿ ತಲೆ ಕೆಳಗೆ ಮಾಡಿ ನಿಂತಂತೆನಿಸು ವುದು," ಎಂದ.

ಇಷ್ಟು ಹೇಳಿ ಆತ ಮನೆಗೆ ಹೋದ. ಹುಕ್ಕಾ ತಾಜಾ ಮಾಡಿದ. ಚಿಲುಮೆಗೆ ಬೆಂಕಿ ಇರಿಸಿದ. ದಮ್ಮೆಳೆಯಲು ಕಾಲ್ಮಣೆಯ ಮೇಲೆ ಕುಳಿತುಕೊಳ್ಳಬೇಕೆನ್ನುವಷ್ಟ ರಲ್ಲಿ ಚೌಧರಿಯವರಿಂದ ಕರೆ ಬಂತು. ಚೌಧರಿಯ ದೊಡ್ಡ ಮನೆಯಲ್ಲಿ ಕಾಲಿರಿಸಿದ ಕೂಡಲೇ ನಾಲ್ಕಾರು ದಾಂಡಿಗರು ಆತನನ್ನು ಸುತ್ತುವರಿದರು. ಚೌಧರಿಯ ಸೇವಕ ಮುನ್ನಿ ಆತನ ಬೆನ್ನಿಗೆ ಚಪ್ಪಲಿ ಏಟು ಹಾಕತೊಡಗಿದ.

ಜೊತೆಯಲ್ಲಿ ಚೌಧರಿ ಬೈಯತೊಡಗಿದ. "ಬೈಠಕ ಮಾಡಿಸುತ್ತಾನಂತೆ ಮೂರ್ಖ ! ನನ್ನಂತೆ ಚಾವಡಿ ಕಟ್ಟಿಸುವನಂತೆ ! ನಾಲ್ಕು ದುಡ್ಡು ಮಾಡಿದ ಕೂಡಲೇ ತನ್ನ ಸ್ಥಾನಮಾನವನ್ನೇ ಮರೆತುಬಿಟ್ಟ ಬೆಪ್ಪ ! ಚೆನ್ನಾಗಿ ಥಳಿಸಿರಿ"

ಕರಮುನಿಗೆ ಬಿದ್ದಷ್ಟು ಚಪ್ಪಲಿ ಏಟು ಇನ್ನಾರಿಗಾದರೂ ಬಿದ್ದಿದ್ದರೆ ಅವರು ಮರೆತುಬಿಡಬಹುದಿತ್ತು. ಆದರೆ ಕರಮು ಅವನ್ನು ಎಣಿಸುತ್ತಿದ್ದ.

ತನ್ನನ್ನು ನೋಡಲು ಬಂದವರಿಗೆ, "ನಾನು ಎಣಿಸುತ್ತಿದ್ದೆ. ಏಕೆಂದರೆ ಕಯಾ ಮತ್ ದಿನ ಅಲ್ಲಾಹನೆದುರು ಚಪ್ಪಲಿ ಏಟಿನ ಎಣಿಕೆ ಒಪ್ಪಿಸುವಲ್ಲಿ ತಪ್ಪಾಗಬಾರ ದಲ್ಲ ? ಅರವತ್ತೆರಡು ಏಟು ಬಿದ್ದವು. ಪೂರ್ತಿ ಅರವತ್ತೆರಡು ಏಟು ಹಾಕುವೆ ಅಲ್ಲಾಹನೆದುರು—ಒಂದಕ್ಕೆ ಎಪ್ಪತ್ತಲ್ಲಾದರೂ. ಚೌಧರಿಗೆ ನನ್ನ ಒಂದೇ ಚಪ್ಪಲಿ ಸಾಕು ಜಗತ್ತಿನ ಎಲ್ಲ ಜನರೆದುರು." ಎಂದ.

ಆಗಲೇ ಮತದಾರರ ಪಟ್ಟಿ ತಯಾರಿಸಲಾಗುತ್ತಿತ್ತು. ಈ ಹಳ್ಳಿಗೂ ಬಂದ ಮತದಾರರ ಪಟ್ಟಿ ತಯಾರಿಸುವವರು ಕರಮುನನ್ನು ಸಹ ಮತದಾರನನ್ನಾಗಿ ನೋಂದಾಯಿಸಲು ಬಂದರು, "ಅಲ್ಲ, ನೀನು ನಿನ್ನ ಹೆಸರು ಕರಮಾ ಎನ್ನುವಿ ಆದರೆ ಕರಮಾ ಎಂಬುದು ಎಂತಹ ಹೆಸರು ? ಕರಮ ಇಲಾಹಿ, ಕರಮ ಅಲಿ ಇಲ್ಲವೆ ಕರಮದೀನ ಎಂದಾದರೂ ಇರಬೇಕಾಗಿತ್ತು. ಕರಮಾ ಎನ್ನುವವರ್‍ಯಾರೂ

ಇರುವುದೇ ಇಲ್ಲ. ಇದು ನಿನ್ನ ನಿಜವಾದ ಹೆಸರಿನ ಅಪಭ್ರಂಶ." ಎಂದರು.

"ನಾನೊಬ್ಬ ಮೀರಾಸಿ ಅಪ್ಪ! ಮೀರಾಸಿಗಳ ಹೆಸರೇ ಹಾಗೆ. ನನ್ನ ಹೆಸರಿನ ಅಪಭ್ರಂಶ ಕರಮೂ......ಜನರು ನನ್ನ ತಂದೆಯನ್ನು ಗಾಮೂ ಎನ್ನುತ್ತಿದ್ದರು. ಆದರೆ ಆತನ ಹೆಸರು ಗಾಮಾ ಎಂದಿತ್ತು."

ಬೇಸತ್ತ ಅವರು ಮತಪಟ್ಟಿಯಲ್ಲಿ "ಕರಮಾ, ತಂದೆ ಗಾಮಾ, ಜಾತಿ ಮೀರಾಸಿ, ವೃತ್ತಿ ಭಿಕ್ಷೆ ಬೇಡುವುದು" ಎಂದು ಬರೆದೊಡನೆ ಕರಮು ಸಿಟ್ಟಿಗೆದ್ದ. "ಇಲ್ಲ ಸಾಹೇಬರೆ ನಾನು ಭಿಕ್ಷುಕನಲ್ಲ. ಭಿಕ್ಷೆಯ ಒಂದು ದುಡ್ಡು ಸಹ ಹರಾಮ ಅಂತಾ ಭಾವಿಸಿರುವೆ. ಆಯುಷ್ಯವಿಡೀ ನಾನು ನನ್ನ ಗಳಿಕೆಯದನ್ನೇ ತಿಂದಿರುವೆ. ನನ್ನ ಮಕ್ಕಳು ವಿದ್ಯಾವಂತರಾದದ್ದು ನನ್ನ ದುಡಿಮೆಯ ಹಣದಿಂದಲೇ, ಈಗ ಅವರು ದುಡಿಯುತ್ತಿದ್ದಾರೆ. ನನಗೆ ನನ್ನ ಪ್ರಯತ್ನದ ಪ್ರತಿಫಲ ನೀಡುತ್ತಿದ್ದಾರೆ. ನಾನೀಗ ಜಕಾತ್ ಕೂಡ ಕೊಡುತ್ತಿರುವೆ. ಹಾಗೆಂದಾಗ ನಾನು ಭಿಕ್ಷುಕ ಹೇಗಾಗುತ್ತೇನೆ? ಭಿಕ್ಷೆ ಬೇಡುವುದನ್ನು ಇಷ್ಟು ಹಗುರವಾಗಿ ಪರಿಗಣಿಸಿದರೆ ಚೌಧರಿಯನ್ನ ಭಿಕ್ಷುಕನೆಂದು ಬರೆಯಿರಿ. ಏಕೆಂದರೆ ರೈತ ದುಡಿದರೆ ಚೌಧರಿ ತಿನ್ನುತ್ತಾನೆ." ಎಂದ.

ಮತದಾರರನ್ನು ನೋಂದಾಯಿಸುವವರೆದುರು ಕರಮು ತನ್ನನ್ನು ಭಿಕ್ಷುಕನೆಂದು ಅಂದದ್ದು ಚೌಧರಿಗೆ ತಿಳಿಯಿತು. ಕೂಡಲೇ ಆತನನ್ನು ದೊಡ್ಡ ಮನೆಗೆ ಕರೆಯಿಸಲಾಯಿತು. ಹಳ್ಳಿಯ ಸಮಸ್ತ ಜನರೆದುರು ತನ್ನ ಮುನ್ಶಿಯಿಂದ ಅವನಿಗೆ ಚಪ್ಪಲಿ ಏಟು ಹಾಕಿಸಲಾಯಿತು. ಚಪ್ಪಲಿ ಏಟು ಬೀಳುತ್ತಿದ್ದಂತೆ ಕರಮು ಒಮ್ಮೆಲೇ ಎದ್ದು ಕುಳಿತು ಮುನ್ಶಿಯ ಮುಂಗೈ ಹಿಡಿದು, "ಸಾಕು. ಅರವತ್ತೆರಡು ಪೂರ್ತಿ ಆಯಿತು. ನನ್ನ ಕೋಟಾ ಪೂರ್ತಿ ಆಯಿತು. ಹೆಚ್ಚು ಪೆಟ್ಟು ಹಾಕಿದರೆ ಕಯಾಮತ್ ದಿನ ಚೌಧರೀಜಿಗೆ ಹೆಚ್ಚು ತ್ರಾಸಾಗುವುದು." ಎಂದ.

"ತ್ರಾಸ ನನಗಾಗುವುದೆ?" ತನ್ನ ತಲೆಯ ಮೇಲೆ ಸೂರ್ಯ ಹರಿದುಬಿದ್ದಂತೆ ಚೌಧರಿಗೆ ವಿಸ್ಮಯವಾಯಿತು. "ನನಗೆಂಥ ತ್ರಾಸಾಗುವುದೋ ಮೂರ್ಖ?" ಕರಮುನ ಹಾವಭಾವ ಬದಲಾಯಿತು.

"ಸರಿ. ನಿಮಗೆ ತ್ರಾಸಾಗದಿದ್ದರೂ ನಿಮ್ಮ ಲೆಕ್ಕವಿಡುವ ದೇವತೆಗಾದರೂ ತ್ರಾಸಾದೀತು."

"ನನ್ನ ಲೆಖ್ಖವೆ?" ಪಲ್ಲಂಗಿನ ಮೇಲೆ ಎದ್ದೇ ನಿಲ್ಲುವನೇನೋ ಎನ್ನುವ ಹಾಗೆ ಚೌಧರಿ ಮಗ್ನುಲಾದ. "ಏನು ಬೊಗಳುವಿಯೊ? ನನ್ನದೆಂಥ ಲೆಖ್ಖ?"

"ಅದೇ, ಬಡವರಿಗೆ ಚಪ್ಪಲಿ ಏಟು ಹಾಕುವುದರ ಲೆಖ್ಖ! ಒಂದಕ್ಕೆ ಎಪ್ಪತ್ತು......" ಇನ್ನು ಮೇಲೆ ಏಟು ಬೀಳಲಿಕ್ಕಿಲ್ಲೆಂದು ಭಾವಿಸಿ ಕರಮು ಎದ್ದು ನಿಂತ. ನೆಲದ ಮೇಲೆ ಬಿದ್ದ ರುಮಾಲನ್ನು ಎತ್ತಿ ಝಾಡಿಸಿದ. "ಈಗ ನೀವೇ ಲೆಖ್ಖ ಮಾಡಿಕೊಳ್ಳಿ ಮಹಾಪ್ರಭು. ಈಗಿನವು ಅರವತ್ತೆರಡು. ಮೊದಲಿನವು ಅರವತ್ತೆರಡು. ನಿಮ್ಮ ಮೇಲೆ ಅಲ್ಲಾಹನ ಕೃಪೆ ಇರಲಿ... ಒಟ್ಟು ಒಂದುನೂರ ಇಪ್ಪತ್ನಾಲ್ಕಕ್ಕೆ ಎಷ್ಟಾದೀತು ಮುನ್ಶೀಜಿ? ಲೆಖ್ಖ ಮಾಡಿ ಚೌಧರಿಯವರಿಗೆ ಹೇಳಿರಿ."

ಚೌಧರಿ ಸಿಟ್ಟಿನಲ್ಲಿ ತನ್ನ ಚಪ್ಪಲಿಯತ್ತ ಕೈ ಚಾಚಿದ. ಅಲ್ಲಿ ನೆರೆದಿದ್ದ ಬಹು ತೇಕ ಜನರು ಕರಮುನ ಮಾತು ಕೇಳಿ ಹಲ್ಲು ಕಿರಿಯುತ್ತಿದ್ದುದನ್ನು ಕಂಡು ಚೌಧರಿ ಕೈ ಹಿಂತೆಗೆದುಕೊಳ್ಳಲಾಗದೆ ನೆಲದ ಮೇಲೆ ಬಿದ್ದ ಹುಲ್ಲುಕಡ್ಡಿಯನ್ನು ಎತ್ತಿ ಕಾಲಲ್ಲಿ ಹಾಕಿ ಪುಡಿಯಾಗುವಂತೆ ಹೊಸಕಿದ. ಬೈಗುಳ ಆತನ ತುಟಿಯ ಮೇಲೆ ತುಡಿಯು ತ್ತಲೇ ಉಳಿದವು.

ಆಗ ಹಕ್ಕಿಗಳು ಗೂಡಿಗೆ ಮರಳುತ್ತಿದ್ದವು. ಸಂಜೆ ಸಮೀಪಿಸಿತ್ತು.

* * *

ಈ ಘಟನೆಯಾದ ಮೇಲೆ ಚೌಧರಿ ಕರಮುನೊಂದಿಗೆ ತುಂಬ ಎಚ್ಚರಿಕೆಯಿಂದ ಮಾತಾಡತೊಡಗಿದ. ಕರಮು ಮಿರಾಸಿ ಏನೋ ಹೌದು. ಆದರೆ ತಿಂದುಂಡು ಆರಾಮದಿಂದಿದ್ದ ಮಿರಾಸಿ. ತಿಂದುಂಡು ಆರಾಮದಿಂದಿರುವವರೆಲ್ಲ ಅಮೇರಿಕೆ ರಶಿಯಾ ಪರಸ್ಪರ ಮಾತಾಡುವಂತೆಯೇ ಮಾತಾಡುತ್ತಾರೆ. ಆದಾಗ್ಯೂ ಚೌಧರಿಯ ದೊಡ್ಡ ಮನೆಯಿಂದ ಬಿಕನಾಸಿ ಜನರೆಲ್ಲ ಎದ್ದು ಹೋಗಿ ಕೇವಲ ಆತನ ಹತ್ತಿರದವ ರಷ್ಟೇ ಉಳಿದರೆ ಅವರೆದುರು ಆತ ತನ್ನ ಗಾಯಗೊಂಡ ಹೃದಯವನ್ನು ಬಿಚ್ಚಿ ತೋರಿಸುತ್ತಿದ್ದ. "ಈಗ ಈ ಮೂರ್ಖ ಕಹಿ ಮಾತ್ರೆಗಳನ್ನೆಲ್ಲ ಉಗುಳಿಬಿಡುತ್ತಿ ದ್ದಾನೆ. ಇನ್ನು ಮೇಲೆ ಈತನಿಗೆ ಸಕ್ಕರೆ ಲೇಪಿತ ಮಾತ್ರೆಗಳನ್ನು ತಿನ್ನಿಸುವೆ!" ಎಂದ ಚೌಧರಿ. ಮತ್ತೆ ತನ್ನ ಪರಿಸರದ ಸೂಕ್ಷ್ಮ ನಿರೀಕ್ಷಣೆಯಲ್ಲಿ ಮಗ್ನನಾದ "ಸಿರಿಯುಮತ್ತು ಕೆಟ್ಟ' ಅಂತಾ ಜನರೆನ್ನುತ್ತಾರೆ. ನನಗನ್ನಿಸುವಂತೆ ಈ ದಿಢೀರ ಶ್ರೀಮಂತರಿಗೆ ಹಣದ ಮದ ಅದಕ್ಕಿಂತಲೂ ಕೆಟ್ಟದ್ದು" ಎಂದ. ಅತ್ತ ಇತ್ತ ಕತ್ತು ಹಿಗ್ಗಿಸಿ ನೋಡಿದ ಚೌಧರಿ, "ಇಲ್ಲಿಯೇ ಎಲ್ಲಿಯಾದರೂ ಕುಳಿತಿರಲಿಕ್ಕಿಲ್ಲವಲ್ಲವೆ ಆ ಸೂಳೆ ಮಗ? ನನಗೆ ನೆನಪಿದೆ: ಒಂದು ಬಾರಿ ನಾನು ಇದೇ ಮನೆಯಲ್ಲಿ ಕುಳಿತು ಆತನನ್ನು ಕುರಿತು ಮಾತಾಡಿದ್ದೆ. ಕತ್ತಲೆಯ ಒಂದು ಮೂಲೆಯೊಳಗೆ ಆತ ಕುಳಿ ತಿದ್ದುದು ನನಗೆ ಗೊತ್ತಾಗಲೇ ಇಲ್ಲ. ಆ ಜಾತ್ಯಾ ಭಿಕಾರಿಯ ಹೊಸ ಠೀವಿಯ

ಬಗ್ಗೆ ಮಾತನಾಡುತ್ತಾ ನವಿಲಿನ ಗರಿಗಳನ್ನು ಧರಿಸಿದರೂ ಕಾಗೆ ಕಾಗೆಯೇ ಎಂದಿದ್ದೆ. ಅದಕ್ಕಾತ ನೆರದವರೆದುರಿಗೇ 'ಹಾಗಲ್ಲ ಚೌಧರೀಯವರೇ, ಬಲ್ಲವರಿಂದ ಕೇಳಿದ ಪ್ರಕಾರ ನವಿಲು ಸಹ ಕಾಗೆಯ ಜಾತಿಗೇ ಸೇರಿದ್ದು. ಬಣ್ಣದ ಗರಿಗಳನ್ನು ಪಡೆದು ಕುಣಿಯಲು ಕಲಿತಿದೆ ಅಷ್ಟೇ !' ಎಂದು ಅಂದುಬಿಟ್ಟ" ಎಂದ.

"ಹಣ ಈ ಬಾಜೀರ್ರಾವನನ್ನು ಹೀಗೆಲ್ಲ ಹಾರಾಡುವಂತೆ ಮಾಡಿದೆ. ಇಲ್ಲ ದಿದ್ದರೆ ಇಲ್ಲಿ ನನ್ನೆದುರು ಬೆಕ್ಕಿನಂತೆ ಮಿಯಾಂವ್ ಅಂತ ತಿರುಗುತ್ತಿದ್ದ. ಹಣ ಆತನ ನಾಲಗೆಯನ್ನು ನನ್ನ ಚಪ್ಪಲಿಯಷ್ಟು ಉದ್ದ ಮಾಡಿದೆ. ಆದರೆ ಇಂಥ ದಿಢೀರ ಶ್ರೀಮಂತರನ್ನು ಹೇಗೆ ಅಂಕೆಯಲ್ಲಿಟ್ಟುಕೊಳ್ಳಬೇಕೆಂಬುದು ನನಗೂ ಗೊತ್ತಿದೆ. ಚಪ್ಪಲಿಯ ಮೇಲೆ ಎಷ್ಟೇ ಕುಸುರಿ ಕೆಲಸ ಮಾಡಿರಲಿ ಅದು ಚಪ್ಪಲಿ ತಾನೆ ? ಅದನ್ನು ಕಾಲಲ್ಲಿಯೇ ಮೆಟ್ಟಬೇಕಲ್ಲವೆ ? ಈ ಮಿರಾಸಿ ಮಗ ನನ್ನ ಹಳ್ಳಿಯಲ್ಲಿರ ಬಯಸಿದರೆ ಮಿರಾಸಿಯಾಗಿಯೇ ಇರಬೇಕು. ಸುಮ್ಮನೆ ನೋಡುತ್ತಿರಿ !" ಎಂದು ಮಾತು ಮುಗಿಸಿದ.

ಚಳಿಗಾಲ ಬಂತು. ಕರಮು ಕೆಲ ದಿವಸ ತನ್ನ ಮಕ್ಕಳ ಹತ್ತಿರ ಇದ್ದು ಮರಳಿ ಹಳ್ಳಿಗೆ ಬಂದ. ಮೈಮೇಲೆ ಬಂಗಾರ ಬಣ್ಣದ ಒಂದು ಕಂಬಳಿಯನ್ನು ಹೊದ್ದು ಕೊಂಡಿರುತ್ತಿದ್ದ. ಕಂಬಳಿಯನ್ನು ಮುಟ್ಟಿ ನೋಡಿದ ಜನ ಕುರಿಯ ಉಣ್ಣೆ ಇಷ್ಟು ಮೃದುವಾಗಿರುವುದೆ ? ಎಂದು ಚಕಿತರಾದರು. ಕರಮುನ ಸಂಬಂಧಿಕನೊಬ್ಬ ಈ ಕಂಬಳಿಯನ್ನು ಮುಟ್ಟಿನೋಡಿದ. "ಬಿಸ್ಮಿಲಾಹ್" ಹೇಳಿ ಕಂಬಳಿಯ ಒಂದು ಮೂಲೆಯನ್ನು ಬಾಯಿಯಲ್ಲಿಟ್ಟುಕೊಂಡು, "ರವಾ ಹಲ್ವಾ ಹೀಗಿರಬೇಕಪ್ಪ. ಬೇಕೆನಿಸಿದಾಗ ಹೊದ್ದುಕೊಳ್ಳಬೇಕು ಇಲ್ಲವೆ ತಿಂದುಬಿಡಬಹುದು" ಎಂದ.

ಭೆಟ್ಟಿಯಾದವರಿಗೆಲ್ಲ ಕರಮು, ಈ ಕಂಬಳಿ ನೂರಕ್ಕೆ ನೂರು ಉಣ್ಣೆಯದು. ಚೆಂದಿರುವುದಷ್ಟೇ ಅಲ್ಲ, ಅದರ ಅಸಲ ಉಪಯೋಗವಿರುವುದು ಒಳಗೆ. ಹೊರಗೆ ಹಿಮ ಬೀಳುತ್ತಿದ್ದರೆ ಒಳಗೆ ಒಲೆಯ ಕಾವು.' ಪಂಜತನ್‌ಪಾಕರ ಆಣೆಗೂ ಚಳಿ ಯಲ್ಲಿಯೂ ಬೆವರು ಬರುತ್ತದೆ" ಎನ್ನುತ್ತಾನೆ.

ಇಡೀ ಓಣಿಯಲ್ಲಿ ಕಂಬಳಿಯ ಚರ್ಚೆ ಆದಮೇಲೆ ಚೌಧರಿಯವರಿಗೂ ವಿಷಯ ವೇನೆಂದು ಗೊತ್ತಾಯಿತು. ಅವರಿಗೆ ಸುದ್ದಿ ತಲುಪಿದ್ದು ಹೀಗೆ—"ಇಂಥ ಕಂಬಳಿ ಸಿಗುವುದು ಚೌಧರಿಯ ಹಣೆಬರಹದಲ್ಲಿಲ್ಲ ಎಂದು ಕರಮು ಅನ್ನುತ್ತಿದ್ದ." ಎಂದು. ಚೌಧರಿ ಮುಗುಳುನಕ್ಕ. ಕರಮುನ ನಡತೆ ಚೌಧರಿಯನ್ನು ಪಕ್ಕಾ ರಾಜಕಾರಣಿ ಯನ್ನಾಗಿಸಿತು.

ಒಂದು ದಿನ ಕರಮು ಈ ಕಂಬಳಿಯನ್ನು ಹೊದ್ದುಕೊಂಡು ಚೌಧರಿಯ ಓಣಿಯಲ್ಲಿ ಹೊರಟಾಗ ಚೌಧರಿ ತನ್ನ ಜನರೊಟ್ಟಿಗೆ ಕುಳಿತು ಬಿಸಿಲಿನಲ್ಲಿ ಮೈ ಕಾಯಿಸಿಕೊಳ್ಳುತ್ತಿದ್ದ. ಕರಮುನನ್ನು ಹತ್ತಿರ ಕರೆದು ಕಂಬಳಿಯ ಮೇಲೆ ಕೈಯಾಡಿಸಿ, "ಎಲ್ಲಿ ಹೊಡೆದಿರುವಿ ?" ಎಂದು ಕೇಳಿದ.

ಕರಮು ಹತ್ತಿರದ ಕಲ್ಲಿನ ಮೇಲೆ ಕುಳಿತುಕೊಂಡ. "ನಾನಂತೂ ಮಹಾಪ್ರಭೂ. ಇಡೀ ಆಯುಷ್ಯದಲ್ಲಿಯೇ ಏನನ್ನೂ ಹೊಡೆದಿಲ್ಲ. ಕಂಬಳಿಯನ್ನೇನು ಹೊಡೆದೇನು ? ಅದೂ ಇಂತಹ ಕಂಬಳಿಯನ್ನು ? ಅದನ್ನು ನೀವು ಮುಟ್ಟಿದರೆ ನಿಮ್ಮ ಮೈ ಮೇಲೆ ಸಹ ಕೂದಲು ಎದ್ದು ನಿಂತಿದ್ದು ನೋಡಿದೆ..."

ತನ್ನ ತುಡುಗು ಸಿಕ್ಕಿತೇನೊ ಎನ್ನುವಂತೆ ಕಳವಳಗೊಂಡ ಚೌಧರಿ ಮುಖ ಬಿಗಿದುಕೊಂಡ. ಆದರೂ ಬಲವಂತವಾಗಿ ನಗುತ್ತಾ "ಸರಿ, ಹೊಡೆದಿಲ್ಲ. ಎಲ್ಲಿಂದ ತಂದಿರುವಿ ?"

ಕರಮು ಉತ್ತರ ಕೊಡಲು ಅವಸರ ಮಾಡಲಿಲ್ಲ. ಅವನ ಕಣ್ಣಲ್ಲಿ ಮಿಂಚು ಮೂಡಿತು. ತನ್ನ ಮಕ್ಕಳ ಬಗ್ಗೆ ಮಾತನಾಡುವಾಗಲೆಲ್ಲ ಆತನ ಕಣ್ಣಗೊಂಬೆಯಲ್ಲಿ ದೀಪ ಉರಿಯುತ್ತಿದ್ದಂತೆ ಭಾಸವಾಗುವುದು.

"ಕಾಲಾಶಾಹಕಾತುನಲ್ಲಿ ನನ್ನ ಮಗ ಸಫ್ರ್ಾಜ್ ಇದ್ದಾನಲ್ಲ..."

"ಓ ಆ ಸರ್ಫಾ !" ಚೌಧರಿ ಕರಮುನ ಮಾತಿನಲ್ಲಿ ತಿದ್ದುಪಡಿ ಮಾಡಿದ.

"ಅದೇ ಅವನೇ ಸಫ್ರ್ಾಜ್..." ಕರಮು ಆ ತಿದ್ದುಪಡಿಗೇನೂ ಮಹತ್ವ ಕೊಡಲಿಲ್ಲ. "ಅಪ್ಪಾ ನೀನು ಇಲ್ಲಿಂದ ಒಳ್ಳೆಯ ಚಪ್ಪಲಿ ಒಯ್ಯಿ ಎಂದು ಆತ ಹೇಳಿದ. ಆಗ ನಾನೆಂದೆ—ಮಗೂ ಹಳ್ಳಿಯಲ್ಲಿ ಚಪ್ಪಲಿ ಸಾಕಷ್ಟಿವೆ. ಮತ್ತೇನಾದರೂ ತಂದುಕೊಂಡು, ಏನಾದರೂ ಕಾಣಿಕೆಯ ವಸ್ತು...ಆಗ ಆತ ಈ ಕಂಬಳಿ ತಂದ. ಮಲೇಶಿಯದಲ್ಲಿ ಆತನ ಸ್ನೇಹಿತನ ತಂದೆ ಇದ್ದಾನೆ. ಆತ ತನ್ನ ಮಗನಿಗಾಗಿ ಈ ಕಂಬಳಿಯನ್ನು ತಂದಿದ್ದ. ಸಫ್ರ್ಾಜ್ ತನ್ನ ತಂದೆಗಾಗಿ ಇದನ್ನು ಕೊಂಡುಕೊಂಡ."

"ನೋಡು ಕರಮು, ನನಗೆ ಈ ಕಂಬಳಿ ಬೇಕು ಅಂತಾ ನಾ ಕೇಳಿದರೆ...?"

"ಹಾಗಿದ್ದರೆ ತೆಗೆದುಕೊಳ್ಳಿರಲ್ಲ ಮಹಾಪ್ರಭು."

"ಸರ್ಫ್ರಾಜ್ ಕೇಳಿದರೆ ಕಳ್ಳರು ಒಯ್ದುಬಿಟ್ಟರು ಎಂದು ಹೇಳುವೆ" ಎಂದು

ಥಟ್ಟನೆ ಸೇರಿಸಿದ—ಕರಮು.

ಚೌಧರಿ ಕರಮುನ ಮಾತನ್ನು ಜೋರಾಗಿ ನಕ್ಕು ಮರೆಸಲು ಪ್ರಯತ್ನಿಸಿದ. ಈ ನಗೆ ಪ್ರಭಾವ ಬೀರುತ್ತಿಲ್ಲವೆಂದು ಎನಿಸಿದ ಮೇಲೆ ಹೇಗೋ ಸಾವರಿಸಿಕೊಂಡು "ಇದರ ಬೆಲೆ ಏನು" ಎಂದು ಕೇಳಿದ.

"ಏನೂ ಬೇಡ ಮಹಾಪ್ರಭೂ !" ಕರಮುನ ಧ್ವನಿಯಲ್ಲಿ ತೃಪ್ತಿ ಇತ್ತು. ನಿಷ್ಕಾಳಜಿ ಇತ್ತು.

"ಆದರೆ ಪುಕ್ಕಟೆ ತೆಗೆದುಕೊಳ್ಳಲಾರೆ. ನಮ್ಮ ಮನೆತನದ ಸಂಪ್ರದಾಯದ ಪ್ರಕಾರ ನಾವು ಪುಕ್ಕಟೆಯಾಗಿ ಏನನ್ನಾದರೂ ಕೊಡುತ್ತೇವೆ ವಿನಾ ತೆಗೆದುಕೊಳ್ಳುವುದಿಲ್ಲ. ನಿನಗೂ ಗೊತ್ತಿಲ್ಲ ? ನಿನಗೆ ಇಡೀ ಆಯುಷ್ಯದ ಅನುಭವವಿದೆ."

"ಹೌದೌದು. ತೆಗೆದುಕೊಳ್ಳುವವರಿಗೆ ಒಮ್ಮೊಮ್ಮೆ ಕೊಡಬೇಕಾಗುವ ಪ್ರಸಂಗವೂ ಬರುತ್ತದೆ. ಮಹಾಪ್ರಭುಗಳೇ, ತೆಗೆದುಕೊಳ್ಳಿರಲ್ಲ ? ಸಫ್ರಾಜ್ ನನಗೆ ಮತ್ತೆ ಕಳಿಸುವನು !"

"ಇಲ್ಲ ಕರಮು ನೀನು ನಮ್ಮ ಮಿರಾಸಿ. ನಿಮ್ಮ ಅಜ್ಜ ಮುತ್ತಜ್ಜರೆಲ್ಲ ನಮ್ಮ ಹಿರಿಯರ ಚಪ್ಪಲಿಗಳನ್ನು ರಿಪೇರಿ ಮಾಡಿದ್ದಾರೆ. ಹೇಳು. ಈ ಕಂಬಳಿಯ ಬೆಲೆ ಏನು ? ಈ ಕಂಬಳಿಗೆ ಎಷ್ಟು ಕೊಟ್ಟಿದ್ದ ಎನ್ನುವುದನ್ನು ಸಫ್ರಾಜ್ ಹೇಳಿರಬೇಕಲ್ಲ ?"

"ಹೌದು ಸಫ್ರಾಜ್ ಹೇಳಿದ್ದ." ಕರಮುನ ಧ್ವನಿಯಲ್ಲಿ ಸಂಚುಗಾರನ ಗತ್ತಿತ್ತು. ಕೊನೆಗೆ ಏನೋ ಒಂದು ನಿರ್ಣಯಕ್ಕೆ ಬಂದವನಂತೆ ಮುಗುಳುನಕ್ಕ. "ಕಂಬಳಿ ಪರದೇಶದ್ದು ಅಲ್ಲವೆ ? ಹೀಗೆಲ್ಲ ದುಂದುವೆಚ್ಚ ಮಾಡಬೇಡವೆಂದು ಸಫ್ರಾಜ್‌ನಿಗೆ ಹೇಳಿದ್ದೆ. ಅದಕ್ಕೆ ಆತ ತಂದೆಯ ಸುಖಕ್ಕಿಂತ ಹೆಚ್ಚೇನಿದೆ ? ಎಂದ. ನೀವು ಹೇಳುತ್ತಿದ್ದುದು ಸರಿ. ಶಿಕ್ಷಣ ಮಕ್ಕಳ ತಲೆ ಕೆಡಿಸಿಬಿಟ್ಟಿದೆ. ಮಹಾಪ್ರಭು. ಕಂಬಳಿಯ ಬೆಲೆ ತುಸು ಹೆಚ್ಚಿದೆ. ಆದರೆ ಸಫ್ರಾ ಮಿರಾಸಿ ಬೆಲೆ ತೆರಬಲ್ಲ, ಆದರೆ ಅದು ನನ್ನಿಂದಾಗದು."

ಚೌಧರಿ ತನ್ನ ಸಿಟ್ಟನ್ನು ತೋರಗೊಡಬಾರದೆಂದು ಪ್ರಯತ್ನಿಸಿದನಾದರೂ ಸಫಲನಾಗಲಿಲ್ಲ. "ಹೇಳು...ಐವತ್ತು...ನೂರು...ಇನ್ನೂರು...ಮುನ್ನೂರು... ಎಷ್ಟು ?"

"ಮುನ್ನೂರಂತೂ ಅಲ್ಲ...ರೀ." ಚಪ್ಪಲಿ ಏಟು ಹಾಕುವುದಕ್ಕೆ ಮೊದಲು

ಮುನ್ನಿ ಕರಮುನನ್ನು ನೋಡಿದಂತೆಯೇ ಕರಮು ಮುನ್ನಿಯನ್ನೊಮ್ಮೆ ನೋಡಿದ. "ಒಟ್ಟಿಗೆ ಇನ್ನೂರ ಅರವತ್ತೆರಡು ಕೊಟ್ಟಿದೆ!" ಎಂದು ಹೇಳಿ ನೆರೆದ ಜನರಿಂದ ಪ್ರಶಂಸೆಯನ್ನು ನಿರೀಕ್ಷಿಸಿದವನಂತೆ ಅವರತ್ತ ದೃಷ್ಟಿ ಹಾಯಿಸಿದ.

"ಇಷ್ಟು ಹಣ ನಿನ್ನ ಮಗ ಕೊಟ್ಟಿರುವನೆ ?"

"ಗಳಿಸುತ್ತಾನಲ್ಲ ಮಹಾಪ್ರಭು..."

"ಹಾಗಾದರೆ ನೀನು ನನ್ನಿಂದ ಇನ್ನೂರ ಅರವತ್ತೆರಡು ರೂಪಾಯಿ ತೆಗೆದು ಕೊಳ್ಳುವಿಯಾ ?"

"ಅರವತ್ತೆರಡು ಬಿಟ್ಟುಬಿಡಿರಿ. ಇನ್ನೂರು ಕೊಟ್ಟರೆ ಸಾಕು."

"ಇನ್ನೂರ ಅರವತ್ತೆರಡಕ್ಕೆ ಇನ್ನಷ್ಟು ಸೇರಿಸಿ ಕೊಟ್ಟೇನು. ಅದಕ್ಕೇನಂತೆ ?" ಚೌಧರಿ ವಿಜಯಿಯಾದವನಂತೆ "ಎಷ್ಟಾದರೂ ನೀನು ನಮ್ಮ ಮಿರಾಸಿ ಅಲ್ಲವೆ ?" ಎಂದ.

"ಆಗಲಿ, ಮುನ್ನೂರ ಇಪ್ಪತ್ನಾಲ್ಕು ಕೊಡಿರಿ."

"ಒಳ್ಳೆ ಅನುಭವಿ ವ್ಯಾಪಾರಿಯಂತೆ ಲೆಖ್ಖ ಮಾಡುವುದನ್ನೂ ಕಲಿತಿರುವಿಯಲ್ಲ ?" ಚೌಧರಿ ನಗಿಸಲು ಪ್ರಯತ್ನಿಸಿದ.

ಕರಮು ಕಂಬಳಿಯನ್ನು ಕಳಚುತ್ತಾ ನಾನಂತೂ ಈಗ ಲೆಖ್ಖ ತಪ್ಪಿ ಖರ್ಚು ಮಾಡುತ್ತೇನೆ ಮಹಾಪ್ರಭು ! ನನಗೆ ಯಾವುದಾದರೂ ಲೆಖ್ಖ ಬರುತ್ತಿದ್ದರೆ ಅದು ಅರವತ್ತೆರಡರ ಲೆಖ್ಖ," ಎಂದ.

ಕರಮುನ ಚಾಟಿಯೇಟನ್ನು ನಿರ್ಲಕ್ಷಿಸಿದ ಚೌಧರಿ ತನ್ನ ಮುನ್ನಿಗೆ, "ಇದೋ ನೋಡಪ್ಪ ಈತನಿಗೆ ಕೊಟ್ಟುಬಿಡು ಮುನ್ನೂರ ಇಪ್ಪತ್ನಾಲ್ಕು," ಎಂದ.

"ರೂಪಾಯಿ ಮುನ್ನಿಯವರೆ ! ಮುನ್ನೂರು ರೂಪಾಯಿ !" ಕರಮು ಮುನ್ನಿಗೆ ಜ್ಞಾಪಿಸಿಕೊಟ್ಟ.

"ರೂಪಾಯಿ ಬೇಡವೆಂದರೆ ಪೈಸೆ..." ಎಂದ ಮುನ್ನಿ.

"ಹಾಗಲ್ಲ. ಮುನ್ನೂರ ಇಪ್ಪತ್ನಾಲ್ಕು ರೂಪಾಯಿ ಕೊಡುವುದರ ಬದಲು ಮುನ್ನೂರ ಇಪ್ಪತ್ನಾಲ್ಕು ಚಪ್ಪಲಿ ಏಟು ಕೊಟ್ಟುಬಿಡಬಾರದು ಅಂತ !"

ಚೌಧರಿ ಮೊದಲು ಮಾಡಿ ಎಲ್ಲರೂ ನಕ್ಕರು. ಆದರೆ ಎಲ್ಲರ ನಗೆಯ ಅರ್ಥ ಬೇರೆ ಬೇರೆಯಾಗಿತ್ತು.

ಕರಮು ಹಣ ತೆಗೆದುಕೊಂಡ. ಮುಗುಳು ನಗುತ್ತ ಹೊರಟುಹೋದ. ತನ್ನೆದುರು ಕಂಬಳಿ ಹಾಸಿ ಚೌಧರಿಯೂ ನಕ್ಕ. ಕಂಬಳಿಯಿಂದ ಮಿರಾಸಿತನವನ್ನು

ಬೇರ್ಪಡಿಸುವವನಂತೆ ಅದನ್ನು ಚೆನ್ನಾಗಿ ಝಾಡಿಸಿದ. ಅದನ್ನು ಮಡಿಕೆ ಹಾಕಿ ಮುನ್ನಿಗೆ ಒಪ್ಪಿಸಿ, "ಮನೆಗೆ ಕಳುಹಿಸಿರಿ ಇದನ್ನು. ದಿನವಿಡೀ ಬಿಸಿಲಲ್ಲಿ ಇಟ್ಟು ನಂತರ ಯಾವುದಾದರೂ ಪೆಟ್ಟಿಗೆಯಲ್ಲಿ ಎಸೆದು ಬಿಡಲು ಹೇಳಿರಿ." ಎಂದ ಚೌಧರಿ. ಆಮೇಲೆ ಜನರನ್ನುದ್ದೇಶಿಸಿ, "ಡಜನ್ ಗಟ್ಟಲೆ ಬಿದ್ದಿವೆ ಇಂತಹ ಕಂಬಳಿಗಳು, ಆದರೆ ಎರಡು ಕವಡಿಯ ಈ ಮಿರಾಸಿ ಇನ್ನೂರು ಮುನ್ನೂರು ರೂಪಾಯಿಯ ಕಂಬಳಿಯನ್ನು ಹೊದ್ದಿರುವುದನ್ನು ನಾ ನೋಡಲಾರೆ. ಚಪ್ಪಲಿ ಕಾಲಲ್ಲೇ ಇರಬೇಕು !" ಎಂದ.

**ಅನುವಾದ : ಹಸನ್ ನಯೀಮ ಸುರಕೋಡ್**

---

ಗಾಂಧೀಜಿಯವರಿಗೆ ತಮ್ಮ ಜನಪ್ರಿಯತೆಯನ್ನು ಹೇಗೆ ಪಣವಾಗಿ ಇಡಬೇಕೆಂದು ಗೊತ್ತಿತ್ತು. ಅಂತರ್ಜಾತೀಯವಲ್ಲದ ವಿವಾಹಗಳಲ್ಲಿ ಭಾಗವಹಿಸಲು ಅವರು ತಿರಸ್ಕರಿಸಿದರು. ವಿವಾಹ ವಿಚ್ಛೇದನಗಳನ್ನು ಅವರು ಸಮ್ಮತಿಸಿದರು. ಐವತ್ತೈದು ಕೋಟಿರೂಪಾಯಿಗಳನ್ನು ಹಠದಿಂದ ಅವರು ಪಾಕೀಸ್ಥಾನಕ್ಕೆ ಕೊಡಿಸಿದರು.

ಈ ಪ್ರದೇಶಕ್ಕೆ ಜೀವದಾನ ಮಾಡುವಂತ ಹೊಸದೇನಾದರೂ ಇದ್ದರೆ ಅದು ಎಷ್ಟು ಅಪಖ್ಯಾತಿಕಾರಿಯಾಗಿದ್ದರೂ ಅವರು ಮಾಡದೇ ಬಿಡುತ್ತಿರಲಿಲ್ಲ.

ಕೆಲವರನ್ನು ಕೋಪಾವಿಷ್ಟರನ್ನಾಗಿ ಮಾಡದೆ ಏನನ್ನೂ ಸಾಧಿಸಲಾಗದು. ನಮ್ಮ ಜನಪ್ರಿಯತೆಯನ್ನು ಪಣವನ್ನಾಗಿ ಒಡ್ಡಿ ಅಂಥವರನ್ನು ಸೆಣೆಸಬೇಕು.

**—ಡಾ || ರಾಮಮನೋಹರ ಲೋಹಿಯಾ**

# ಜಾಹಿರಾತು–ನವ್ಯಸಾಹಿತ್ಯ–ಬಂಡಾಯಸಾಹಿತ್ಯ ಇತ್ಯಾದಿ...

—ಯು. ಆರ್. ಅನಂತಮೂರ್ತಿ

ಈ ಶತಮಾನದ ಬಂಡವಾಳಶಾಹಿ ಉತ್ಪಾದನಾ ವ್ಯವಸ್ಥೆಯು ಜಾಹಿರಾತಿನ ಮೂಲಕ ನಮ್ಮ ಮನಸ್ಸಿನ ಮೇಲೆ ಮಾಡುವ-ಮಾಡುತ್ತಿರುವ ಪರಿಣಾಮ ಅಗಾಧ ವಾದದ್ದು. ಬಹುಉತ್ಪನ್ನ ವ್ಯವಸ್ಥೆಗೆ ಮಾಧ್ಯಮವಾದ ಈ ಜಾಹಿರಾತು ಮನಸ್ಸಿನ ಭಾವನೆಗಳನ್ನು ಕೆರಳಿಸಿ–ನಾವು ಅದನ್ನು ಪಡೆಯದಿದ್ದರೆ ಅಪೂರ್ಣರು ಎಂಬ ಭಾವನೆ ಗಳನ್ನು ಬೆಳೆಸಿದೆ. ಆದ್ದರಿಂದ ಇಂದು ಬಂಡವಾಳಶಾಹಿ ಉಪಯೋಗಿಸುವ 'ಜಾಹಿ ರಾತು' ಸಾಹಿತ್ಯದಷ್ಟೇ ಪರಿಣಾಮಕಾರಿಯಾಗಿರುತ್ತೆ. ಜಾಹಿರಾತಿನ ಮೂಲಕ ನಡೆಸುವ ಪ್ರಯೋಗಗಳು ಇಂದು ನಮ್ಮನ್ನು ಗೊಂದಲಕ್ಕೀಡು ಮಾಡುತ್ತಿದೆ. ಇಂಥ ಸಂದರ್ಭದಲ್ಲಿ ನಾನು ಹೀಗೆಯೇ ಬರೆದರೆ ಜಾಹಿರಾತಿನಂತಿರುತ್ತೆ ಎಂಬ ನೋವಿದೆ. ಒಂದು ಇಡೀ ಜನಾಂಗವನ್ನು ಮಾತಿನ ವೈಖರಿಯ ಮೂಲಕ ಗೆದ್ದ ಮತ್ತು ಗೊಂದಲ ಗೊಳಿಸಿದ ಈ ಜಾಹಿರಾತು ವ್ಯವಸ್ಥೆಯನ್ನು ಎಚ್ಚರದಿಂದ ನೋಡಬೇಕಾ ಗಿದೆ. ಇಂಥ ಸಂಕೀರ್ಣ ಪರಿಸರದಲ್ಲಿ ಸೂಕ್ಷ್ಮಜ್ಞರಾದ ಸಾಹಿತಿಗಳು ಪ್ರತಿನಿತ್ಯ ಹದ ಗೆಡುತ್ತಿರುವ ಭಾಷೆಯನ್ನುಳಿಸುವುದು ಹೇಗೆ ಎಂದು ತಿಳಿದರು. ಇದರ ನಡುವೆ ಕೆಲವರು ತಮ್ಮ ಭಾವವನ್ನು ಪ್ರಚೋದಿಸುವುದರಲ್ಲಿ ವೆಸ್ಟೆಡ್ ಇಂಟರೆಸ್ಟನ್ನ ಹೊಂದಿ ದ್ದರು. ಆದರೆ ಇದೇ ಸಂದರ್ಭದಲ್ಲಿ ನವ್ಯಕಾವ್ಯ ಅಂತರಂಗದ ಪ್ರತಿಭಟನೆಯಾಗಿ ಬಂತು. ಇದು ಬಹಳಷ್ಟು ಸಮಸ್ಯೆಗಳನ್ನು ಎದುರಿಸಬೇಕಾಯಿತು. ನಾನು ಬರೀ ಭಾವುಕನಲ್ಲ. ನನ್ನನ್ನು ಸಮಗ್ರವಾಗಿ ಕಂಡುಕೊಳ್ಳಬೇಕಾಗಿದೆ. ಈ ರೀತಿ ಅರಿ ಯುವುದರ ಮೂಲಕ ಅವನು ವೈಚಾರಿಕತೆಯ ಹಂತವನ್ನು ಮುಟ್ಟಲು ಸಾಧ್ಯ ವಾಯಿತು.

ಸಾಂಸ್ಕೃತಿಕವಾಗಿ ಇಡೀ ಜನವನ್ನು ಎರಡು ವರ್ಗಗಳಾಗಿ ವಿಂಗಡಿಸಬಹುದು. ಇದರಲ್ಲಿ ಹಗುರವಾಗಿ ಪ್ರಚೋದಿಸುವ ಮತ್ತು ಆಳವಾಗಿ ಪ್ರಚೋದಿಸುವ ಎರಡು ವರ್ಗಗಳು. ಇಂಥ ಸಮಯದಲ್ಲಿ ಟ್ರೇಡ್‌ಯೂನಿಯನ್‌ನಲ್ಲಿ ಮಾತಾಡುವ ಮಾತು —ಎಲ್ಲಾ ಪಕ್ಷಗಳ ಭಾಷೆ ಒಂದೇ ಆಗುತ್ತಿದೆ. ಇದರ ನಡುವೆ ಗಾಂಧೀ ನಮ್ಮ ಮಿತಿಗಳನ್ನು ಮೀರಿ ಇನ್ನೊಂದು ಹಂತದಲ್ಲಿ ಮಾರ್ಕ್ಸ್ ಕೊಡಲೆತ್ನಿಸುವುದು.

ಒದುಕು ಅನ್ನುವುದಕ್ಕೆ ಒಂದು ಟೆಕ್ಸ್‌ಚರ್ ಇದೆ. ಈಗ ಆ ಟೆಕ್ಸ್‌ಚರನ್ನು ಕಳೆದುಕೊಂಡು ಸರಳುತ್ತಿದ್ದೇವೆ. ಆದ್ದರಿಂದ ಸಾಹಿತ್ಯದಲ್ಲಿ ಎರಡು ಗುಂಪಾಗಿದೆ. ಅವರಲ್ಲಿ ಬಹುಜನರಿಗೆ ಬರೆಯುವ ಗುಂಪು. ಮತ್ತೊಂದು ಸೂಕ್ಷ್ಮಜ್ಞರಿಗೆ ಬರೆಯುವುದು. ಇದರಿಂದ ಬಹುಜನರಿಗೆ ಬರೆಯುವ ಗುಂಪು ಎಲ್ಲಾ ಪಾಪ್ಯುಲರ್ ಗಿಮಿಕ್ಸನ್ನು ಬಳಸತೊಡಗಿದೆ. ಆದರೆ ಯಾವುದು ಓದುವಾಗ ನಮಗೆ ಡಿಸ್ಟರ್ಬ್ ಆಗುತ್ತೋ ಅದು ಸಾಹಿತ್ಯವಾಗಿರುತ್ತೆ. ಇದು ಓದುವಾಗ ನಮ್ಮನ್ನು ಕಸಿವಿಸಿಗೊಳಿಸುತ್ತೆ. ಯಾಕೆಂದರೆ ಹಿಂದೆ ಒಂದು ವರ್ಗಸಮಾಜವಿತ್ತು. ಇಂದು ಅದು ಹೋಗಿ ಅದರ ಹಿಂದೆ ಮಾಸ್ ಆವರಿಸಿದೆ. ಈ ಜನಪ್ರಿಯ ಸಾಹಿತ್ಯ (popu-lar literature) ನಮ್ಮನ್ನು ಯಾವುದು ನಿಜವಾದ ಸಾಹಿತ್ಯ ಎನ್ನುವ ಮಟ್ಟಿಗೆ ಗೊಂದಲಕ್ಕೀಡುಮಾಡಿದೆ. ಆದರೆ ಬಂಡವಾಳಶಾಹಿ ಬರುವುದಕ್ಕೆ ಮುನ್ನ ಇದ್ದದ್ದು ಚೆನ್ನಾಗಿತ್ತು. ಪಂಪ ಮತ್ತು ಕುಮಾರವ್ಯಾಸನ ಪ್ರಯೋಗಗಳು ನಿಜವಾದ ಪ್ರಯೋಗಗಳು. ಅವರು ಈಗಲೂ ನಮಗೆ ರಿಲೆವೆಂಟ್ ಆಗಿರುವುದು ಅವರ ನೈಜತೆಯ ಕಾರಣಕ್ಕಾಗಿ. ಅವರಿಗೆ ಸಾಹಿತ್ಯ ಅರ್ಥಪೂರ್ಣವಾಗಿತ್ತು. ಹಾಗೆಯೇ ಈ ಕಾಲದ ನವ್ಯಸಾಹಿತಿಗಳು ನಿಜವಾದ ಸಾಹಿತಿಗಳು ಮತ್ತು ನಿಜವಾದ ಬಂಡಾಯಗಾರರು. ಈಗಿನ ಬಂಡಾಯ ಸಾಹಿತಿಗಳಲ್ಲಿ ಪ್ಯಾಸ್ಟರ್‌ನಾಕ್ ಪ್ರೇಮಕವನಗಳನ್ನು ಬರೆಯುವುದರ ಮೂಲಕ ಪ್ರತಿಭಟಿಸಿದ. ಯಾವುದನ್ನು ಓದುವಾಗ ನಿಧಾನವಾಗಿ ಓದಬೇಕೋ ಅದು ಒಳ್ಳೆಯ ಸಾಹಿತ್ಯವಾಗಿರುತ್ತೆ. ಹಿಂದೆ ಜನಪದ ಜಿನುಯಿನ್ ಆಗಿತ್ತು.

ಇಪ್ಪತ್ತನೇ ಶತಮಾನದಲ್ಲಿ ಮಾಸ್‌ಗೆ ಬರೆಯುವ ಮತ್ತು ಸೂಕ್ಷ್ಮಜ್ಞರಿಗೆ ಬರೆಯುವ ಮಂದಿ ಎಲ್ಲಾ ವರ್ಗ ಜಾತಿಗಳಲ್ಲಿರಬಹುದು. ಯಾರು ಸೂಕ್ಷ್ಮಜ್ಞರಾಗಿ ಬರೆಯುತ್ತಾರೆ ಅವರಿಗೆ ಜನಪದ ಹೆಚ್ಚು ಸಹಕಾರಿಯಾಗಬಹುದು. ಇಂಥಾ ಕೆಲಸ ಏಟ್ಸ್‌ನಂಥ ಸೂಕ್ಷ್ಮಜ್ಞನಿಗೆ ಸಾಧ್ಯವಿತ್ತು. ಈ ದೃಷ್ಟಿಯಿಂದ ನಮ್ಮಲ್ಲಿ ಬೇಂದ್ರೆ ಇರಬಹುದು. ಐರ್‌ಲೇಂಡ್‌ನಲ್ಲಿ ಏಟ್ಸ್ ಇರಬಹುದು. ನಮ್ಮ ಬಂಡಾಯ ಸಾಹಿತಿಗಳು ಜನರಿಗೆ ಬರೆಯಿರಿ ಅಂತಾರೆ. ಆದರೆ ಪ್ರತಿಯೊಂದು ಕಾಲದಲ್ಲೂ ಒಳ್ಳೆಯ ಸಾಹಿತ್ಯ ಬರೆದಾಗ ಅದು ಜನರಿಗೆ ಮುಟ್ಟಿದೆ.

ಜಾಹಿರಾತಿನ ಮೂಲಕ ಬಂಡವಾಳಶಾಹಿ ಮಾಡುವ ವ್ಯವಸ್ಥೆಯನ್ನು ಧಿಕ್ಕರಿಸಬೇಕಾಗಿದೆ. ಆದರೆ ಈ ಜಾಹಿರಾತಿಗೆ ಬಳಸುವ ನೇಯ್ಗೆ ಚೆನ್ನಾಗಿರುತ್ತೆ. ಇವನ್ನು ಬಳಸುವ ರೆಟರಿಕ್ ಕೂಡ ಹೆಚ್ಚು ಸೂಕ್ಷ್ಮವಾಗಿರುತ್ತೆ. ಇಲ್ಲಿ ಗ್ಯಾಸ್‌ನ ಮಾತು ಹೆಚ್ಚು ಅರ್ಥಪೂರ್ಣ ಅನಿಸುತ್ತೆ. ಅವನ ಪ್ರಕಾರ 'It is optical

trick'. ಇದಕ್ಕೆ ಇತ್ತೀಚಿನ ಬಹಳಷ್ಟು ಕೃತಿಗಳು ಉದಾಹರಣೆ. ಈ ದೃಷ್ಟಿಯಿಂದ ಇದನ್ನು ಮೀರಿ ನಿಂತ ನವ್ಯ ಸಾಹಿತ್ಯ ನಮ್ಮನ್ನು ಧ್ಯಾನಸ್ಥಿತಿಗೆ ತರುವುದರಿಂದ ಅದು ಹೆಚ್ಚು ಆಳದಿಂದ ಕೂಡಿರುತ್ತೆ. ಆದರೆ ಬಂಡಾಯ ಸಾಹಿತ್ಯದಿಂದ ಇಂಥ ಧ್ಯಾನಸ್ಥಿತಿಯನ್ನು ಪಡೆಯಲಾಗುವುದಿಲ್ಲ.

[ಅನಂತಮೂರ್ತಿಯವರು ಡಿಸೆಂಬರ್ ತಿಂಗಳಲ್ಲಿ ನಡೆದ ಸಾಹಿತ್ಯ ಶಿಬಿರದಲ್ಲಿ ಮಾತಾಡಿದ್ದನ್ನ ಲೇಖನ ರೂಪಕ್ಕೆ ಕೊಡಲು ಪ್ರಯತ್ನಿಸಿದೆ.]

## ಸಾದರ ಸ್ವೀಕಾರ.

ಮನುಷ್ಯನೆಲ್ಲಿ ?
(ಕವನ ಸಂಗ್ರಹ)
ಎಸ್. ಎಸ್. ಹಿರೇಮಠ
ಬೆಲೆ : ರೂ. 1-25
ಪ್ರಕಾಶಕರು :
ಸಮತಾ ಪುಸ್ತಕ ಪ್ರಕಾಶನ,
ಹೊಸಪೇಟೆ-583201.

ದೇವನೂರರ ಕತೆಗಳು
(ವಿಮರ್ಶೆ)
ಟಿ. ಪಿ. ಅಶೋಕ
ಬೆಲೆ : ರೂ. 3-00
ಪ್ರಕಾಶಕರು :
ಶ್ರೀಮತಿ ಪುಷ್ಪಾರಾಜ್
ಉಡುಪಿ.

# ಬಂಡವಾಳ ವರ್ಗದ ಬಿಕ್ಕಟ್ಟು-

## ಅಡ್‌ಹಾಕ್ ಪರಿಹಾರಗಳು

—ಕೆ. ಪಿ. ವಾಸುದೇವನ್

(ಕಳೆದ ಸಂಚಿಕೆಯಿಂದ)

ಬಂಡವಾಳವರ್ಗ ಹೀಗೆ ಚಿಂದಿ ಎದ್ದು ಹೋದಾಗ ಅದು ತನ್ನನ್ನು ತಾನು ಹೇಗೆ ಸಂರಕ್ಷಿಸಿಕೊಳ್ಳುತ್ತದೆ? ಈ ಪ್ರಶ್ನೆಗೆ ಉತ್ತರ ಸುಲಭ. ಅದು ಪರಸ್ಪರ ವಿರುದ್ಧವಾದ ಅನೇಕ, ತಾತ್ಕಾಲಿಕ [Ad-hoc] ಪರಿಹಾರಗಳನ್ನು ಸೂಚಿಸುತ್ತ ಬರುತ್ತದೆ. 1969 ರಲ್ಲಿ ಕಾಂಗ್ರೆಸ್ ಒಡೆದದ್ದು, ಇಂದಿರಾ ವಿರುದ್ಧ ಅನೇಕ 'ಪಾರ್ಟಿಬಾಸ್'ಗಳು ನಿಂತು, ಅದರ ಮೂಲಕ ಆಕೆ ಪಡೆದ ರ್‍ಯಾಡಿಕಲ್ ಇಮೇಜ್, ಈ ಇಮೇಜ್‌ನಿಂದಾಗಿ 1971 ರ "ಮಿಡ್‌ಟರ್ಮ್" ಚುನಾವಣೆಯಲ್ಲಿ ಆಕೆ ಪ್ರಚಂಡ ಬಹುಮತದಿಂದ ಆರಿಸಿ ಬಂದಿದ್ದು, ಇಂಥಾ ಒಂದು ತಾತ್ಕಾಲಿಕ ಪರಿಹಾರವೇ ಆಗಿದೆ. ಆಕೆಯನ್ನು ವಿರೋಧಿಸಿದ ಪಕ್ಷದೊಳಗಿನ ಗುಂಪು ನಾಶವಾಯಿತು. ಶ್ರೀಕಾಕುಲಂನಲ್ಲಿ, ನಕ್ಸಲ್‌ಬಾರಿಯ ದಂಗೆಯ ಈ ಕೇಂದ್ರದಲ್ಲಿ, ಇಂದಿರಾ ಗಾಂಧಿಯ ಹೆಸರು ಹೇಳಿಕೊಂಡ ಅಭ್ಯರ್ಥಿ ಒಬ್ಬ ಪ್ರಚಂಡ ಬಹುಮತದಿಂದ ಆರಿಸಿ ಬಂದ. ಇಂದಿರಾ ಗಾಂಧಿ ಮುಂದೆ ಪಾಕಿಸ್ಥಾನದ ಮೇಲೆ ನಡೆದ ಒಂದು ಯುದ್ಧದಲ್ಲಿ ಜಯ ಗೊಳಿಸಿ, ಬಾಂಗ್ಲಾದೇಶವನ್ನು ಸ್ಥಾಪಿಸಿ, ಜನಪ್ರಿಯತೆಯ ತುತ್ತ ತುದಿಗೆ ಮುಟ್ಟಿದಳು. ಪಶ್ಚಿಮ ಬಂಗಾಲದ ಸರ್ಕಾರದಿಂದ, ಆಕೆಯ ಆಡಳಿತಕ್ಕೆ ಹಾಗೂ ಇಂಡಿಯಾದ ಬಂಡವಾಳ ವರ್ಗಕ್ಕೆ ಮಗ್ಗುಲು ಮುಳ್ಳಾಗಿದ್ದ ಸಿ. ಪಿ. ಎಂ. ಸರ್ಕಾರವನ್ನು ಒಡಿಸುವುದರಲ್ಲೂ ಆಕೆ ಯಶಸ್ವಿಯಾದಳು. ಕಲ್ಕತ್ತೆಯಲ್ಲಿನ ಎಡ ಪಕ್ಷಗಳ ಚಳುವಳಿಯ ಪ್ರಭಾವವನ್ನು ಮುರಿಯಲು, ಸಿ. ಪಿ. ಐ. (ಎಂ) ಹಾಗೂ ಸಿ.ಪಿ.ಐ. (ಎಂ. ಎಲ್.) ಪಕ್ಷಗಳ ನಡುವೆ ಇದ್ದ ಗುಂಪುಗಾರಿಕೆ [Sectarian] ದ್ವೇಷದ ನೆಪದಲ್ಲಿ ಪೋಲಿಸ್ ಹಾಗೂ ಸೈನ್ಯವನ್ನು ಉಪಯೋಗಿಸಲಾಯಿತು. ಕೊಲೆ, ಚಿತ್ರಹಿಂಸೆ ಮತ್ತು ಬಂಧನಗಳು ನಗರ ಹಾಗೂ ಹಳ್ಳಿಗಳಲ್ಲಿ ನಡೆದು, ರೈತರ ಬಂಡಾಯವನ್ನು ತುಳಿದು, ಕಾರ್ಮಿಕರ ಚಳುವಳಿಯನ್ನು ಭಂಗಗೊಳಿಸಿ, ಪಶ್ಚಿಮಬಂಗಾಲದಲ್ಲಿ "ಶಾಂತಿಸ್ಥಾಪನೆ" ಮಾಡಲಾಯಿತು! ಚಾರು ಮಜುಮದಾರ್, ದೇಶದಲ್ಲಿ ರೈತಕ್ರಾಂತಿಯ ದೀಪವನ್ನು ಬೆಳಗುತ್ತಿದ್ದವನನ್ನು ಬಂಧಿಸಲಾಯಿತು. ಮುಂದೆ

ಆತ ಬಂಧನದಲ್ಲೆ ಮರಣವನ್ನು ಹೊಂದಿದನು. ಇಂದಿರಾಗಾಂಧಿ ತನ್ನ ಎಲ್ಲ ಒಳಗಿನ ವಿರೋಧಗಳನ್ನು ದಮನಮಾಡಿ, ಹೊರಗಿನ ವಿರೋಧವನ್ನು ಮಟ್ಟಹಾಕಿ ಅತ್ಯಂತ ಸುಭದ್ರ ಸ್ಥಿತಿಯಲ್ಲಿ ಕಾಣಿಸಿಕೊಂಡಳು. ಆದರೆ ಈ ರಾಜಕೀಯ ವಿಜಯಗಳು ನಿಂತಿದ್ದ ಅಡಿಪಾಯ ನಡುಗುತ್ತಿತ್ತು. ಮುಂದೆ ರೈಲ್ವೇ ಮುಷ್ಕರ ಮತ್ತು ಜೆ. ಪಿ. ಚಳುವಳಿ ಇಡೀ ದೇಶದಲ್ಲೇ ವ್ಯವಸ್ಥೆಯ ವಿರುದ್ಧ ಮೂಡಿದ ಅತೃಪ್ತಿಯ ಸಾಂಕೇತಿಕ ಪ್ರತಿಭಟನೆಗಳಾಗಿ ಕಾಣಿಸಿಕೊಂಡವು. ಸರ್ಕಾರ ಮುಂದೆ ತುರ್ತು ಸ್ಥಿತಿಯಲ್ಲಿ ಕೈಗೊಂಡ ಎಲ್ಲ ಕ್ರಮಗಳನ್ನು ರೈಲ್ವೇ ಕಾರ್ಮಿಕರ ವಿರುದ್ಧ ಪ್ರಯೋಗಿಸಿತು. ಅತ್ಯಂತ ಸಂಘಟಿತರಾಗಿ, ಎಲ್ಲ ರೀತಿಯ ದಬ್ಬಾಳಿಕೆಗಳ ವಿರುದ್ಧ ನಿಂತ ಈ ಕಾರ್ಮಿಕರ ಹೋರಾಟ ಏನನ್ನೂ ಸಾಧಿಸದೆ ಮುಕ್ತಾಯವಾಯಿತು. ಇದೇ ರೀತಿಯಲ್ಲಿ ಅತ್ಯಂತ ಅವ್ಯವಸ್ಥಿತವಾಗಿ ಗುಜರಾತಿನಲ್ಲಿ, ಅನಂತರ ಬಿಹಾರದಲ್ಲಿ ಕಾಣಿಸಿಕೊಂಡ ವಿದ್ಯಾರ್ಥಿಗಳು ಹಾಗೂ ಜನರ ಅತೃಪ್ತಿಯ ನಿಟ್ಟುಸಿರು, ಜೆ. ಪಿ. ಚಳುವಳಿಯಾಗಿ ಪರಿವರ್ತನೆಗೊಂಡಿತು. ಎಡಪಕ್ಷಗಳು ತಮ್ಮ ಮಾಮೂಲಿ ಜಡತೆಯಿಂದ ಬಿಡಿಸಿಕೊಂಡು ಇದೇನು ಎಂದು ನೋಡುವಷ್ಟರಲ್ಲಿ ಅದರಲ್ಲಿ ರಾಜಕೀಯವಾಗಿ ಅನೇಕ ಮಂಸಲತ್ತುಗಳನ್ನು ಮಾಡುತ್ತಿದ್ದ, ಜನಗಳಿಂದ ತಿರಸ್ಕೃತ ರಾಜಕಾರಣಿಗಳು, ಗೊಂದಲವಾದಿಗಳು ಧುಮುಕಿ ಪ್ರಚಂಡ ಜನಾನುರಾಗ ಗಳಿಸಿಕೊಳ್ಳುತ್ತಿದ್ದ ಚಳುವಳಿಗೆ ಯಾವುದೇ ಸೈದ್ಧಾಂತಿಕ ತಿರುವನ್ನು ನೀಡದೆ, ಜೆ. ಪಿ. ಅವರು 'ಕಾರಿಸ್ಮಾ' ಅನ್ನು, ಜನತೆಯ ಸಿಟ್ಟನ್ನು ತಮಗೆ ಬೇಕಾದ ರೀತಿಯಲ್ಲಿ ಶೋಷಿಸತೊಡಗಿದರು.

ಬಂಡವಾಳ ವರ್ಗ ಮತ್ತೊಂದು ಅಡ್‌ಹಾಕ್ ಪರಿಹಾರವನ್ನು ಕಂಡುಕೊಳ್ಳಬೇಕಾಗಿ ಬಂದಿತು. ಇದುವರೆಗೆ ಅನೇಕ ರೀತಿ ರೂಢಿಗತವಾದ ಅಸ್ತ್ರಗಳನ್ನು ಬಳಸಲಾಗಿತ್ತು. ಈಗ ರೂಢಿಯನ್ನು ಮೀರಿದಂಥ, ಸಂವಿಧಾನ ಬದ್ಧವಲ್ಲದಂಥ ಮಾರ್ಗದ ಉಪಾಯಗಳನ್ನು ಬಳಸಿಕೊಳ್ಳುವುದು ಅಗತ್ಯವಾಯಿತು. ತುರ್ತುಸ್ಥಿತಿ ಜಾರಿಗೆ ಬಂತು. ಆದರೆ ಆಳುವ ವರ್ಗದಲ್ಲೇ ಇದ್ದಂಥ ವೈರುಧ್ಯಗಳಿಂದಾಗಿ ತುರ್ತುಸ್ಥಿತಿಯನ್ನು ಕೈ ಬಿಡುವ ಅಗತ್ಯವೂ ಮೂಡಿತು. ಇಂದಿರಾ ಪಕ್ಷ ಸೋತು ಜನತಾಪಕ್ಷ ಅಧಿಕಾರ ರೂಢವಾಗಿದ್ದು ಇಂಥ ಒಂದು ತಾತ್ಕಾಲಿಕ ಪರಿಹಾರ ಮಾತ್ರ. ಜನತೆಗೆ ಬಂಡವಾಳವರ್ಗ ಸಮಸ್ಯೆಯ ಪರಿಹಾರಕ್ಕೆ ನೀಡುವ ಅನೇಕ ಹುಸಿ ಭರವಸೆಗಳಲ್ಲಿ ಇದೂ ಒಂದು. ಮುಂದೆ ಜನತಾಪಕ್ಷ ಸೋತು ಪುನಃ ಇಂದಿರಾಪಕ್ಷ ಅಧಿಕಾರಕ್ಕೆ ಬಂದಿದ್ದು ಬಂಡವಾಳವರ್ಗದ ಕಟ್ಟಕಡೆಯ ಪರಿಹಾರೋಪಾಯವಾಗೇ. ಜನತಾಪಕ್ಷ ಅಧಿಕಾರಕ್ಕೆ ರೂಢವಾಗಿದ್ದಾಗ ತರಲು ಯತ್ನಿಸಿದ I. R. Bill ಮತ್ತು ಇಂದಿರಾಗಾಂಧಿ ತರಲು ಯತ್ನಿಸಿದ Maintenance of essential servies bill-

ಎರಡೂ ಒಂದೇ ವರ್ಗದ ಆಸಕ್ತಿಯನ್ನು ಕಾಯ್ದುಕೊಳ್ಳುವ ಉಪಾಯಗಳೇ ಆಗಿವೆ. ಇಂದಿರಾಗಾಂಧಿ ತಂದಿರುವ ಹಾಗೂ ತರಲು ಯೋಚಿಸುತ್ತಿರುವ ಎಲ್ಲ ಕಾನೂನು ಗಳೂ ಬಂಡವಾಳ ವರ್ಗ ನಿರಾತಂಕವಾಗಿ ಇರಲು ಸೂಕ್ತವಾತಾವರಣ ನಿರ್ಮಾಣದ ಯತ್ನಗಳೇ ಆಗಿವೆ.

ಅಂದರೆ ಇದರ ಅರ್ಥ ಬಂಡವಾಳವರ್ಗದ ಆಸಕ್ತಿಯನ್ನು ಕಾಯ್ದುಕೊಳ್ಳಲು ಯತ್ನಿಸಿದ ಈ ಎರಡೂ ಪಕ್ಷಗಳ ಸ್ವರೂಪ ಒಂದೇ ಹಾಗೂ ಈ ಪಕ್ಷಗಳು ಏಕರೂಪೀ ಎಂದೇನಲ್ಲ. ಎರಡೂ ಪಕ್ಷಗಳಲ್ಲಿ ವಿವಿಧ ಆಸಕ್ತಿಯನ್ನು ಕಾಯಲು ಹೆಣಗುವ ವ್ಯವಸ್ಥೆಯ ಒಳಗೇ ಲಾಭದ ಹಿಸ್ಸೆಗೆಯತ್ನಿಸುವ ಅನೇಕ 'ಲಾಬಿ' ಗಳನ್ನು ಗುರ್ತಿಸ ಬಹುದಾಗಿದೆ. ಕಾಂಗ್ರೆಸ್, ಜನತಾ ಎರಡರಲ್ಲೂ ಮಧ್ಯಮವರ್ಗ, ಕುಲಕ್, ಮುಸ್ಲಿಮ್ ಹಾಗೂ ಹಿಂದೂ ಮತಾಂಧರು, ಶ್ರೇಷ್ಟ-ಜಾತಿ ವಾದಿಗಳು, ಮುಂತಾದ ಹಲವು ಲಾಬಿಗಳನ್ನು ನಾವು ಲೆಕ್ಕ ಮಾಡಬಹುದು. ಯಾವುದೋ ಒಂದು ಲಾಬಿ ಪ್ರಬಲವಾಗುವುದು ಚರಣ್‌ಸಿಂಗ್ ಉತ್ಪಾತದಂಥ ಘಟನೆಗಳಿಗೆ ಅವಕಾಶ ಮಾಡಿ ಕೊಡುತ್ತವೆ. ಆದರೆ ಮೂಲಭೂತವಾಗಿ ಈ ಎರಡೂ ಪಕ್ಷಗಳ ವರ್ಗಾಸಕ್ತಿ ಬಂಡ ವಾಳ ವರ್ಗಗಳ ಒಟ್ಟಾರೆ ವರ್ಗಾಸಕ್ತಿಗೆ ಪೂರಕವಾಗೇ ಇರುತ್ತವೆ. ಕಾಂಗ್ರೆಸ್ ಪಕ್ಷ, ಜನತಾ ಪಕ್ಷಕ್ಕಿಂತ ಸಮರ್ಪಕವಾಗಿ ಆ ವರ್ಗಾಸಕ್ತಿಯನ್ನು ನಿರ್ವಹಿಸಬಲ್ಲದು ಎಂಬ ಕಾರಣಕ್ಕೆ ಅದಕ್ಕೆ ಈಗ ಪುರಸ್ಕಾರ ದೊರೆತಿದೆ.

ಆದರೆ ಆ ಪಕ್ಷವೂ ಕೂಡ ದೇಶದಲ್ಲಿನ ಬಂಡವಾಳ ವರ್ಗ ನಿರ್ಮಿಸಿ ಬಿಟ್ಟಿ ರುವ ಅನೇಕ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಾಗದೇ ಕಣ್ಣು ಕಣ್ಣು ಬಿಡು ತ್ತಿದೆ. ಉದಾಹರಣೆಗೆ ಅಸ್ಸಾಂ ಗಲಭೆಯನ್ನೇ ತೆಗೆದುಕೊಳ್ಳೋಣ. ಅಸ್ಸಾಮಿ ನದು ಮೂಲಭೂತವಾಗಿ ಆರ್ಥಿಕ ಸಮಸ್ಯೆ. ಅಸ್ಸಾಮೀಯರಿಗೆ ಕೆಲಸ ದೊರಕದೆ ಹೋಗಿರುವುದಕ್ಕೆ ಮೂಲಕಾರಣ, ಅಸ್ಸಾಂನಲ್ಲಿ ಕೈಗಾರಿಕೀಕರಣ ಆಗದೇ ಇರು ವುದು. ಕೆಲವೇ ಅನುಕೂಲ ಸ್ಥಳಗಳಲ್ಲಿ ಕೈಗಾರಿಕೆಗಳ ಕೇಂದ್ರೀಕರಣ ಬಂಡವಾಳ ವರ್ಗದ ಮತ್ತೊಂದು ವೈಶಿಷ್ಟ್ಯ. ಅಸ್ಸಾಮನ್ನು ಬೆಳೆಸದಿದ್ದಾಗ, ತಮ್ಮ ಸಮಸ್ಯೆಗಳ ಪರಿಹಾರಕ್ಕೆ ಜನ ಬಂಡೆದಿದ್ದು ಸ್ವಾಭಾವಿಕ. ಈ ಸಮಸ್ಯೆಯನ್ನು ಪರಿಹರಿಸಲು ಸಾಧ್ಯ ವಾಗದ ಆಳುವ ವರ್ಗದ ಏಜಂಟರು ಜನರಸಿಟ್ಟನ್ನು ಬಂಗಾಲಿಗಳ ಮೇಲೆ ತಿರುಗು ಮತೆ ಮಾಡಿರುವುದು ಕೂಡ ಸ್ಪಷ್ಟ. ಜನರ ಸಿಟ್ಟನ್ನು ಇಡೀ ವ್ಯವಸ್ಥೆಯ ವಿರುದ್ಧ ತಿರುಗಿಸುವ ಸೈದ್ಧಾಂತಿಕತೆಯ ಅಭಾವದಲ್ಲಿ ಜನತಾ ಆಂದೋಲನವೊಂದು ಹೀಗೆ ಎದುರಿಗೆ ಸಿಕ್ಕಿದ ಬಂಗಾಲಿಗಳ ಮೇಲೆ ಎರಗಿತು. ಶ್ರಮಜೀವಿ, ಶ್ರಮಜೀವಿಗಳ ನಡುವೆ, ರಾಷ್ಟ್ರೀಯತೆ, ಭಾಷೆ, ಪ್ರಾದೇಶಿಕತೆ, ಜಾತಿ, ಜನಾಂಗ ಮುಂತಾದ

ನೂರಾರು ಕಾರಣಗಳನ್ನು ಒಡ್ಡಿ, ಒಡಕನ್ನು ಹುಟ್ಟಿಸುವುದು ಬಂಡವಾಳವರ್ಗದ ಹಂಚಿಕೆ ನಮ್ಮ ಎಡಪಕ್ಷಗಳು ಅಸ್ಸಾಮಿನ ಜನಗಳ ನಿಜವಾದ ಸಿಟ್ಟನ್ನು ಆ ಹೋರಾಟದಲ್ಲಿ ಭಾಗವಹಿಸಿ, ಅದಕ್ಕೆ ಸೂಕ್ತ ನಾಯಕತ್ವ ನೀಡುವುದರ ಮೂಲಕ ವ್ಯವಸ್ಥೆಯ ವಿರುದ್ಧ ತಿರುಗಿಸದೆ, ಹೊರಕ್ಕೇ ಉಳಿದು ಅದನ್ನು ಛಿದ್ರಕ ಶಕ್ತಿಗಳ ಹೋರಾಟ ಎಂಬ ಲೇಬಲ್ ಹಚ್ಚಿ ಕರೆಯುತ್ತಿರುವುದು ವಿಷಾದಕರ. ಜನಗಳು ಈ ನಮ್ಮ ವಿವಿಧ ರಾಷ್ಟ್ರಗಳ ಒಕ್ಕೂಟವಾದ ಇಂಡಿಯಾದಿಂದ ದೂರ ಹೋಗಲು ಬಯಸಿದರೆ, ತಾತ್ವಿಕವಾಗಿ ಬೇಡ ಎನ್ನಲು ಬರುವುದಿಲ್ಲ. ಆದರೆ ಹಾಗೆ ದೂರ ಸಿಡಿಯುವುದರಿಂದ ಉಂಟಾಗುವ ನಷ್ಟಗಳನ್ನು ಮನವರಿಕೆ ಮಾಡಿಕೊಡಬಹುದು. ಇದು ಹೋರಾಟದ ಹೊರನಿಂತವರ ಭಾಷಣಗಳಿಂದ ಸಾಧ್ಯವಿಲ್ಲ. ಅಲ್ಲದೆ ಯಾವುದೇ ನಿಜವಾದ ಜನರ ಹೋರಾಟವನ್ನು ಎಡಪಕ್ಷಗಳು ಗುರ್ತಿಸಿ, ಅವುಗಳಿಗೆ ಸೂಕ್ತ ತಾತ್ವಿಕ ನಿರ್ದೇಶನ ನೀಡದಿದ್ದಲ್ಲಿ, ಆ ಹೋರಾಟಗಳು ಆಳುವ ವರ್ಗದ ಏಜೆಂಟರುಗಳ ಕೈಗೆ ಹೋಗಿ ಬಿಡುತ್ತವೆ. ಜೆ. ಪಿ. ಚಳುವಳಿ, ಅಸ್ಸಾಮಿನ ಹೋರಾಟಗಳಲ್ಲಿ ಆರ್. ಎಸ್. ಎಸ್. ತೂರಿಕೊಳ್ಳಲು ಸಾಧ್ಯವಾದದ್ದು ಹೀಗೆ. ಕೊನೆಗೆ ಈ ಹೋರಾಟಗಳು ಬಂಡವಾಳ ವರ್ಗಕ್ಕೆ ಹಿತವುಂಟುಮಾಡುವ ಹೋರಾಟಗಳಾಗಿ ಬದಲಾವಣೆ ಹೊಂದಿಬಿಡುತ್ತವೆ

ಈ ಮೇಲೆ ಹೇಳಿದ ವಿಷಯಗಳೆಲ್ಲ ಒಂದು ಸಂಗತಿಯನ್ನು ಸ್ಪಷ್ಟಮಾಡಿದೆ. 1960 ರ ಕೊನೆಯಿಂದಲೂ ಈ ದೇಶದ ಮುಂದೆ ಇರುವುದು ಒಂದೇ ರೀತಿಯ ಬಿಕ್ಕಟ್ಟು. ಇದು ಬಂಡವಾಳ ವರ್ಗದಲ್ಲಿ ಕಂಡುಬರುವ ಅನಿಶ್ಚಯತೆ ಹಾಗೂ ಅಸ್ಥಿರತೆಯ ಪ್ರತೀಕ. ಈ ಬಿಕ್ಕಟ್ಟು ಹಂತ ಹಂತವಾಗಿ ಬೆಳೆಯುತ್ತ ಬಂದಿದ್ದು, ಈಗ ಹೇರಳವಾಗಿದೆ.

ದೇಶದ ಯಾವುದೇ ಮೂಲೆಯಲ್ಲಿ ಕಾರ್ಮಿಕರು ತಮ್ಮ ಬೇಡಿಕೆಗಳ ಪರವಾಗಿ ಹೋರಾಟ ಮಾಡದೇ ಇಲ್ಲ. ಕಾರ್ಮಿಕ ಶಕ್ತಿ ಬರೀ ತಮ್ಮ ತಮ್ಮ ಆರ್ಥಿಕ ಬೇಡಿಕೆಗಳನ್ನು ಬಿಟ್ಟು, ರಾಜಕೀಯ ಬೇಡಿಕೆಗಳಿಗಾಗೂ ಹೋರಾಡುತ್ತಿದ್ದಾರೆ. ದಲಿತ ಸಂಘಟನೆ, ಕರ್ನಾಟಕ, ಮಹಾರಾಷ್ಟ್ರ ಹಾಗೂ ಬಿಹಾರ ರಾಜ್ಯಗಳಲ್ಲಿ ಪ್ರಬಲವಾಗಿ ಬೆಳೆಯುತ್ತಿದ್ದು, ತೀವ್ರ ಪ್ರತಿಭಟನೆಯಿಂದ ತನ್ನ ಹಕ್ಕುಗಳಿಗಾಗಿ ಹೋರಾಡುತ್ತಿದೆ. ರೈತರುಗಳು ಬಂಡೇಳುತ್ತಿದ್ದಾರೆ. ನಕ್ಸಲ್ ವಾದಿಗಳು ಪುನಃ ತಲೆ ಎತ್ತಿ ಗೆರಿಲ್ಲಾ ರೀತಿಯ ಹೋರಾಟಗಳನ್ನು ಪ್ರಾರಂಭಿಸಿದ್ದಾರೆ. 'ವರ್ಗಶತ್ರುವಿನ ಕೊಲೆ'ಎಂಬ ಸ್ಲೋಗನ್ ಮೂಲಕ ಅವರು ಮತ್ತೆ ತಮ್ಮ ಸಂಘಟನೆಯ ವಿರುದ್ಧ ತಾವೇ ರಾಜ್ಯದ ದಮನಕಾರಿ ಮಂತ್ರಗಳನ್ನು ತಿರುಗಿಸಿಕೊಂಡು, ಸಂಪೂರ್ಣವಾಗಿ ಸಂಘಟನೆಯನ್ನು ಹಾಳುಮಾಡಿಕೊಳ್ಳುತ್ತಿದ್ದಾರೆ. ದೇಶವಿಡೀ ಸಮಸ್ಯೆಗಳು ರಾಶಿರಾಶಿಯಾಗಿ ಬೀಳುತ್ತಿದ್ದರೆ. ಕೇಂದ್ರದಲ್ಲಿ ಹಾಗೂ ರಾಜ್ಯಗಳಲ್ಲಿ ಮಂತ್ರಿಮಂಡಲ ವಿಸ್ತರಿಸಲೂ ಸಾಧ್ಯ

ವಾಗದಷ್ಟು ಆಳುವ ಪಕ್ಷದ ಒಳಗೇ ವೈರುದ್ಧ್ಯಗಳು ಬೆಳೆದು ನಿಂತಿವೆ.

ಈ ದುರ್ಭರ ಸ್ಥಿತಿಯಿಂದ ಪಾರಾಗಲು ಆಳುವ ವರ್ಗ ಉಪಶಮನಗಳನ್ನು ಹುಡುಕುತ್ತಲೇ ಇರುತ್ತವೆ. ಬಂಡವಾಳ ವರ್ಗದಲ್ಲಿ ಸಂಪೂರ್ಣ ನಿಷ್ಕ್ರಿಯತೆ ಕಾಣಿಸಿ ಕೊಂಡಾಗ, ಆ ವರ್ಗ ಐತಿಹಾಸಿಕವಾಗಿ ತಾನು ಕೈಗೊಳ್ಳಬಹುದಾದ, ದೇಶದ ಕೈಗಾರಿಕೀಕರಣ ಅಥವಾ ಜನತಾಂತ್ರಿಕ ಕ್ರಮಗಳನ್ನು ಕೈಗೊಳ್ಳಲು ಅಸಹಾಯಕ ವಾಗುತ್ತದೆ. ಇಂಥ ಸಂದರ್ಭಗಳಲ್ಲಿ ಕಾರ್ಮಿಕವರ್ಗ ಸರ್ಕಾರವನ್ನು ಕೈಗೆತ್ತಿ ಕೊಳ್ಳುವಷ್ಟು ಪ್ರಬಲವಾಗಿ ಸಂಘಟಿತವಾಗಿಲ್ಲದೇ ಹೋದಲ್ಲಿ, ಆಳುವ ವರ್ಗ ತನ್ನ ಪ್ರಜಾತಂತ್ರದ ಮುಖವಾಡವನ್ನು ಕಳಚಿಹಾಕಿ, ಪ್ರಜಾತಂತ್ರ ವಿರೋಧಿ ಕ್ರಮ ಗಳಿಂದ ಜನಗಳನ್ನು ಹತ್ತಿಕ್ಕಲು ಯತ್ನಿಸುತ್ತದೆ ಎಂದು ಮಾರ್ಕ್ಸ್ ಹೇಳುತ್ತಾನೆ. ಬಂಡವಾಳ ವರ್ಗ ನಿಷ್ಕ್ರಿಯವಾಗಿದೆ. ಶ್ರಮಜೀವಿಗಳ ವರ್ಗ ಸಂಪೂರ್ಣವಾಗಿ ಸಂಘಟಿತವಾಗಿಲ್ಲ. ಈಗ ಸಾಮಾಜಿಕ ಶಕ್ತಿಗಳ ಚದುರಂಗದಾಟದಲ್ಲಿ, ತುರ್ತುಸ್ಥಿತಿ ಯನ್ನೂ ನಾಚಿಸುವಂಥ ಉಗ್ರಕ್ರಮಗಳ ಜನತಂತ್ರ ವಿರೋಧಿ ವಾತಾವರಣ ಮೂಡ ಲಿದೆ. ಇದನ್ನು ಎಲ್ಲರೂ ನೆನಪಿಟ್ಟುಕೊಳ್ಳುವುದು ಒಳಿತು.

ಮೇಲೆ ನಾನು ನಮ್ಮ ದೇಶದ ಕಾರ್ಮಿಕ ವರ್ಗ ಅಧಿಕಾರ ಕೈಗೆ ಎತ್ತಿಕೊಳ್ಳಲು ಇನ್ನೂ ಸಂಘಟಿತವಾಗಿಲ್ಲ ಎಂದು ಹೇಳಿದ್ದೇನೆ. ಇದನ್ನು ಕೆಲವರು ಪ್ರಶ್ನಿಸಬಹುದು. ಆದರೆ ನಮ್ಮ ದೇಶದ ಕಾರ್ಮಿಕ ಸಂಘಟನೆಗಳು ಅಥವಾ ಟ್ರೇಡ್ ಯೂನಿಯನ್‌ಗಳು ಅತ್ಯಧಿಕ ಪ್ರಮಾಣದಲ್ಲಿ ಒಟ್ಟಾಗಿರುವುದು ನಿಜ. ಆದರೆ ಈ ಸಂಘಟನೆಗಳ ಹೋರಾಟವೆಲ್ಲ ಆರ್ಥಿಕ ಹೋರಾಟಗಳೇ ಆಗಿವೆ. ನಮ್ಮ ದೇಶದ ಟ್ರೇಡ್‌ಯೂನಿ ಯನ್‌ಗಳು ಒಂದು ಒಗ್ಗಟ್ಟಿನ ಪರಂಪರೆಯನ್ನು ನಿರ್ಮಿಸಿಕೊಂಡಿಲ್ಲ. ವಿ.ವಿ. ಗಿರಿ ಅವರಿಂದ ಪ್ರಾರಂಭವಾದದ್ದು. ಉದ್ದಕ್ಕೂ ನಮ್ಮ ದೇಶದ ಟ್ರೇಡ್ ಯೂನಿಯನ್ ಸಂಘಟನೆಗಳು ಒಡೆಯುತ್ತಲೇ ಇವೆ. ಹೀಗೆ ಇವುಗಳು ಒಡೆಯಲು ನಮ್ಮ ಕಮ್ಯೂ ನಿಸ್ಟ್ ಪಕ್ಷಗಳ ನಾಯಕ ವರ್ಗವೂ ಬಹು ಮಟ್ಟಿಗೆ ಕಾರಣ. Lenin ಹೇಳಿದ economisms ಗೇ ಇವು ಸೀಮಿತವಾಗಿ ಕೆಲಸಮಾಡುತ್ತಿರುವುದು ನಿಜವಾದರು, ಈ ಒಡೆದ ಮನೆಯಲ್ಲೂ ಅನೇಕ ರೀತಿಯ ರಾಜಕೀಯ ಹೋರಾಟಗಳನ್ನು ನಾವು ಗುರ್ತಿಸಬಹುದಾಗಿದೆ. ಆದರೆ ಈ ರಾಜಕೀಯ ಹೋರಾಟಗಳು ಕೇವಲ ಕಾರ್ಮಿಕ ಸಂಘಟನೆಯ ಹಕ್ಕುಗಳಿಗೆ ಚ್ಯುತಿ ಬಂದ ಸಂದರ್ಭಗಳಲ್ಲಿ ಮಾತ್ರ ಹೊರ ಹೊಮ್ಮು ತ್ತವೆ. ಬಿಳಿ ಕಾಲರ್ ಕಾರ್ಮಿಕರುಗಳಲ್ಲಿ ಕಂಡುಬರುವಷ್ಟು ರಾಜಕೀಯ ಪ್ರಜ್ಞೆ ಬೇರೆ ಶ್ರಮಜೀವಿಗಳಲ್ಲಿ ಕಾಣಿಸದಿರುವುದು, ನಮ್ಮ ಎಡಪಕ್ಷ ರಾಜಕೀಯ ವಾತವರಣದಲ್ಲಿನ ಸೈದ್ಧಾಂತಿಕ ಗೊಂದಲ ಮುಂತಾದ ಅನೇಕ ವೈರುದ್ಧ್ಯಗಳನ್ನು ಮೀರಿ ಕ್ರಾಂತಿಪ್ರಜ್ಞೆ ಈ ದೇಶದ ಶ್ರಮಜೀವಿಗಳಲ್ಲಿ ಮೂಡಬೇಕಿದೆ. ಈ ಎಲ್ಲ ಹಿನ್ನೆಲೆಯಲ್ಲಿ ನಮ್ಮ

ಶ್ರಮಿಕ ವರ್ಗ, ಕ್ರಾಂತಿಯ ಮುಂಚೂಣಿಯಲ್ಲಿ ನಿಂತು ದೇಶವನ್ನು ನಡೆಸಿಕೊಂಡು ಹೋಗುವಲ್ಲಿ ಸಾಕಷ್ಟು ಸಂಘಟಿತವಾಗಿಲ್ಲ ಎಂದರೆ. ಅದು ಉತ್ಪ್ರೇಕ್ಷೆ ಆಗದು.

ಎಲ್ಲಕ್ಕಿಂತ ಹೆಚ್ಚಾಗಿ ಸಿದ್ಧಾಂತದ ಅಭಾವ ಈ ದೇಶದಲ್ಲಿ ಭೂತ ನರ್ತನ ಮಾಡುತ್ತಿದೆ. ಒಂದು ಕ್ರಾಂತಿಕಾರಿ ಸಿದ್ಧಾಂತವಿಲ್ಲದೆ ಒಂದು ಕ್ರಾಂತಿಕಾರಿ ಪಕ್ಷ ಇರಲು ಸಾಧ್ಯವಿಲ್ಲ ಎಂದು ಲೆನಿನ್ ಹೇಳುತ್ತಾನೆ. ನಮ್ಮ ಕಮ್ಯೂನಿಸ್ಟರ ಬಳಿ ಕ್ರಾಂತಿಕಾರಿ ಸಿದ್ಧಾಂತ ಇಲ್ಲ ಎಂಬುದು 65ರಿಂದಲೂ ಇದ್ದುಕೊಂಡೇ ಬಂದ ಪರಿಸ್ಥಿತಿಯನ್ನು ಉಪಯೋಗಿಸದೆ ಬಿಟ್ಟಿರುವುದರಿಂದಲೇ ಅರ್ಥವಾಗುತ್ತದೆ. ರಷ್ಯಾದ ಮೂಲಕವೋ, ಚೀನಾದ ಮೂಲಕವೋ ತಮ್ಮ ತಮ್ಮ ಸಿದ್ಧಾಂತಗಳನ್ನು ಆಮದುಮಾಡಿಕೊಳ್ಳದೇ, ಈ ಪಕ್ಷಗಳು ಲೆನಿನ್ ಮಾರ್ಕ್ಸ್ ಮತ್ತು ಎಂಗೆಲ್ಸ್‌ರ ಮೂಲ ಬರಹಗಳಿಂದ ಸೈದ್ಧಾಂತಿಕವಾಗಿ. ಬೆಳೆಯಲು ಯತ್ನಿಸಬೇಕು. ಇದಕ್ಕೆ ಪೂರಕವಾಗಿ ಇವು ಲೇಬಲ್ ಹಚ್ಚದೆ ಸ್ವವಿಮರ್ಶೆಯ ಮುಕ್ತ ಚರ್ಚೆಗೆ ಸೂಕ್ತ ವಾತಾವರಣ ನಿರ್ಮಿಸಿಕೊಳ್ಳಬೇಕು. Polemics ಇಲ್ಲದೆ ಸಿದ್ಧಾಂತ ಬೆಳೆಯದು. Polemics ನ ವಾತಾವರಣ ಬೆಳೆಯಲು ಧೈರ್ಯವಾಗಿ ತಮ್ಮ ತಮ್ಮ ಅನುಮಾನಗಳ ಜೊತೆ ಚರ್ಚೆ ಮಾಡಲು ಕಮ್ಯೂನಿಸ್ಟ್ ಪಕ್ಷದ ಜನರು ತಯಾರಾಗಬೇಕು. ಈ ಚರ್ಚೆ ಎಷ್ಟು ಮೂಲಭೂತವಾದರೆ ಅಷ್ಟು ಅವರಿಗೂ, ಈ ದೇಶದ ಶೋಷಿತರಿಗೂ ಅನುಕೂಲ. ಈ ದೇಶದ ಶೋಷಿತರಿಗೆ ಇರುವ ಒಂದೇ ಭರವಸೆ ಎಂದರೆ ಈ ದೇಶದ ಕಮ್ಯೂನಿಸ್ಟರು. ಆದರೆ ಅವರುಗಳು ಬಹಳಷ್ಟು ಮಟ್ಟಿಗೆ ಬೌದ್ಧಿಕತೆಯ ವಿರೋಧಿಗಳಾಗಿ ಎಡಬಿಡಂಗಿಗಳಾಗಿ ಕೂತಿರುವುದು ಈ ಪ್ರದೇಶದಲ್ಲಿ ಪರಿಹರಿಸಲು ಸಾಧ್ಯವಾಗದ ಅನೇಕ ವೈರುಧ್ಯಗಳಲ್ಲಿ ಮಹತ್ವವಾದ ಮತ್ತೊಂದು ಅಸಂಗತಸಂಗತಿ.

(ಈ ಲೇಖನದ ಬಗ್ಗೆ ನಿಮ್ಮ ಪ್ರತಿಕ್ರಿಯೆಯನ್ನು ಬರೆದು ಕಳಿಸಿ, ಚರ್ಚೆಯಲ್ಲಿ ಭಾಗವಹಿಸಿ.)

**ಗ್ರಂಥ ಋಣ :**

ಮಾರ್ಕ್ಸ್ : ಕ್ಯಾಪಿಟಲ್ (ವಾಲ್ಯೂಮ್ 1).
ಎಂಗೆಲ್ಸ್ : ಕ್ಯಾಪಿಟಲ್ ಕುರಿತು.
ಲೆನಿನ್ : ಇಂಪೀರಿಯಲಿಸಮ್: ಹೈಯೆಸ್ಟ್ ಸ್ಟೇಜ್ ಆಫ್ ಕ್ಯಾಪಿಟಲಿಸಮ್. ; ಕ್ಯಾಪಿಟಲಿಸಮ್ ಇನ್ ಅಗ್ರಿಕಲ್ಚರ್ ; ವಾಟ್ ಈಸ್ ಟುಬಿ ಡನ್ ; ಡೆವಲಪ್‌ಮೆಂಟ್ ಆಫ್ ಕ್ಯಾಪಿಟಲಿಸಮ್ ಇನ್ ರಷ್ಯಾ
ಪಾವ್ಲೋವ್ : ಹಿಸ್ಟಾರಿಕಲ್ ಪ್ರಿಮಿಸಿಸ್ ಆಫ್ ಇಂಡಸ್ಟ್ರಿಯಲೈಸೇಷನ್ ಟು, ಕ್ಯಾಪಿಟಲಿಸಮ್
ಪಾಲ್‌ಸ್ವೀಜಿ ಮತ್ತು ಪಾಲ್‌ಬರಾನ್ : ಮನಾಪಲಿ ಕ್ಯಾಪಿಟಲ್.
ಪಾಲ್‌ಸ್ವೀಜಿ : ಥಿಯರಿ ಆಫ್ ಕ್ಯಾಪಿಟಲ್ ಡೆವಲಪ್‌ಮೆಂಟ್.
ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ವಾರ್ಷಿಕ ಸಂಚಿಕೆಯಸಂಪಾದಕೀಯ.

# ಲೋಹಿಯಾರವರ ಜಾತಿ ಮತ್ತು ವರ್ಗ ಸಂಬಂಧಗಳು

—ವೇದರಾಜ್

(ಕಳೆದ ಸಂಚಿಕೆಯಿಂದ)

ಆದ್ದರಿಂದ ಜಾಟ್‌ಸಿಖ್ಖ ಶ್ರೀಮಂತ ರೈತರು, ಮಧ್ಯಮ ರೈತರು ಒಂದು ಕಡೆ, ಹರಿಜನ ಕೃಷಿ ಕಾರ್ಮಿಕರು ಇನ್ನೊಂದು ಕಡೆ, ಇವರ ನಡುವಿನ ಹೋರಾಟದಲ್ಲಿ ಈ ಜಾಟ್‌ಸಿಖ್ಖ ಬಡರೈತರು ಕೃಷಿ ಕಾರ್ಮಿಕರ ಪರವಹಿಸಲಾಗಲಿಲ್ಲ. ಆದರೆ ಅವರು ತಮ್ಮದೇ ಕೋಮಿನವರಾದ ಶ್ರೀಮಂತ ರೈತರ ಪಕ್ಷವನ್ನೂ ವಹಿಸದೆ ಸುಮ್ಮನಿದ್ದರು. ಕೆಲವರು ಒಳಗೊಳಗೇ ಕೃಷಿಕಾರ್ಮಿಕರಿಗೆ ತಮ್ಮ ಸಹಾನುಭೂತಿ ತೋರಿಸಿದರು. [44]

'ಜಾತಿ ಅಥವಾ ವರ್ಗ' ಎನ್ನುವ ಲೋಹಿಯಾ ಸಿದ್ಧಾಂತ ಈ ಘಟನೆಗಳನ್ನು ಅರ್ಥಮಾಡಿಕೊಳ್ಳಲು ಯಾವ ಸೂತ್ರವನ್ನು ಕೊಡುವುದಿಲ್ಲ. 'ಸಮಾನತೆ ಅಥವಾ ನ್ಯಾಯ' ಎನ್ನುವುದಕ್ಕೆ ಇಲ್ಲಿ ಏನೂ ಅರ್ಥ ಕಾಣುವುದಿಲ್ಲ. 'ಸಮಾನತೆ ಮತ್ತು ನ್ಯಾಯವೇ' ಇಲ್ಲಿ ಹೆಚ್ಚು ಸಮರ್ಪಕವೆನಿಸುತ್ತದೆ. ಜಾತಿ ಮತ್ತು ವರ್ಗ ಇಲ್ಲಿ ಒಂದನ್ನೊಂದು ಮರೆಸುವಂತೆ (overlapping) ಇವೆ. ಜಾತಿ ಎಂದರೆ ಬೇರೆ ಬೇರೆ ವರ್ಗಗಳು ತಮತಮಗೆ ತಕ್ಕ ಸ್ಥಾನವನ್ನು ಗಳಿಸಿಕೊಂಡು ಹೆಚ್ಚು ಕಾದಾಡದೆ ಇರುವ ಒಂದು ಸಂಸ್ಥೆಯೆಂಬ ಲೋಹಿಯಾ ನಿರ್ವಚನೆಯ ಅಸಮರ್ಪಕತೆಯೂ ಇಲ್ಲಿ ಸ್ಪಷ್ಟವಾಗುತ್ತದೆ. "ಜಾತಿ ಎಂದರೆ ಸಮಾಜದಲ್ಲಿ ಅಕ್ಕಪಕ್ಕದಲ್ಲಿದ್ದೂ ಒಟ್ಟಿಗೆ ಬದುಕುತ್ತಿಲ್ಲವೆಂದೆನಿಸುವಂತಹ ವಿಂಗಡಣೆ" [45] ಎನ್ನುವ ಕೊಸಾಂಬಿಯವರ ವಿವರಣೆ ಹೆಚ್ಚು ಸಮರ್ಪಕವಾಗಿದೆಯೆಂದನಿಸುತ್ತದೆ. ಜಾತಿಯನ್ನು ಅವರು ಆದ್ಯಾವಸ್ಥೆಯ (primitive stage) ಉತ್ಪಾದನಾ ಹಂತದ ವರ್ಗ [46] ಎಂದು ನಿರ್ವಚಿಸುತ್ತಾರೆ. ಇನ್ನು ಕೆಲವು ಸಮಾಜವಿಜ್ಞಾನಿಗಳು ಜಾತಿಪದ್ಧತಿಯನ್ನು ಊಳಿಗಮಾನ್ಯ ಅಥವಾ ಅದಕ್ಕೂ ಹಿಂದಿನ ಉತ್ಪಾದನಾ ವಿಧಾನದಲ್ಲಿನ ವರ್ಗ ವಿಭಜನೆ ಎಂದಿರುವುದೂ [47] ಇದೇ ಅರ್ಥ ಕೊಡುತ್ತದೆ.

---

44. Economic & Political Weekly, 27 ಅಕ್ಟೋ. '79, ಪುಟ 1753.
45. Culture & Civilisation in Ancient India, 15.
46. ಅದೇ, ಪುಟ 50.
47. Economic & Political Weekly ಯ 1973 ವಾರ್ಷಿಕ ಸಂಚಿಕೆ.

"ಇನ್ನೊಬ್ಬನಿಗೆ ಸಹಾಯಕನಾಗಿರುವ, ಇನ್ನೊಬ್ಬನು ತಿನ್ನಬಹುದಾದ, ಇನ್ನೊಬ್ಬನು ಇಚ್ಛೆ ಬಂದಂತೆ ತುಳಿಯಬಹುದಾದ ವೈಶ್ಯನಂತೆ...... ಇನ್ನೊಬ್ಬನ ಆಳಾದ, ಮನಸ್ಸು ಬಂದಾಗ ಸಾಗಹಾಕಬಹುದಾದ, ಮನಸ್ಸು ಬಂದಾಗ ಕೊಲ್ಲಬಹುದಾದ ಶೂದ್ರನಂತೆ........ಎನ್ನುವ ಐತರೇಯ ಬ್ರಾಹ್ಮಣ-ಗ್ರಂಥದ ಉಕ್ತಿಯನ್ನು [48] ಓದಿದ ಮೇಲೆ ಆರಂಭಿಕ ಸ್ಥಿತಿಯಲ್ಲಿ ಜಾತಿಪದ್ಧತಿಯ ವರ್ಗ–ಆಧಾರದ ಬಗ್ಗೆ ಸಂಶಯ ಉಳಿಯುವುದಿಲ್ಲ. ಮತ್ತು "ಜಾತಿಪದ್ಧತಿ ಪುರಾತನ ಸಮಗ್ರೀಕರಣದ ಪ್ರಯತ್ನ" ಎನ್ನುವ, "ಜಾತಿಯೆಂದರೆ ನ್ಯಾಯದ ಅಭಿವ್ಯಕ್ತಿ" ಎನ್ನುವ ಲೋಹಿಯಾರ ಹೇಳಿಕೆಗಳನ್ನು ಒಪ್ಪುವುದು ತೀರಾ ಕಷ್ಟವಾಗುತ್ತದೆ. ಇಲ್ಲಿ 'ನ್ಯಾಯ' ಮತ್ತು 'ಸಮಗ್ರೀಕರಣ'ದ ಕಲ್ಪನೆ ಪುರಾತನ ಸಮಾಜದಲ್ಲಿ ನಿಜವಾದ ಆಹಾರೋತ್ಪಾದಕರಾಗಿದ್ದ ವೈಶ್ಯ ಮತ್ತು ಶೂದ್ರ ಜಾತಿಗಳ ಮಟ್ಟಿಗೆ ಅರ್ಥಹೀನ ಎಂಬುದು ಸ್ಪಷ್ಟ. ಈ ಪದಗಳು ಅರ್ಥಪೂರ್ಣವಾಗುವುದು ಆ ಸಮಾಜದ ಆಳುವ ವರ್ಗ–ಜಾತಿಗಳಾಗಿದ್ದ ಬ್ರಾಹ್ಮಣ ಮತ್ತು ಕ್ಷತ್ರಿಯರಿಗೆ ಮಾತ್ರ. ಅಲ್ಲದೆ ಈ ಅರ್ಥವಾದರೂ ಯಾವುದು ? ನಿಜವಾದ ಆಹಾರೋತ್ಪಾದಕರ ಕ್ರಮದ ಮೇಲೆ ಅವರೂ ಒಪ್ಪುವಂತೆ ಸವಾರಿಮಾಡಬಹುದಾದ 'ಧಾರ್ಮಿಕ' ರೀತಿಯೇ ಅದು. 'ಸಮಗ್ರೀಕರಣ', 'ನ್ಯಾಯ' ಇತ್ಯಾದಿ ಶಬ್ದಗಳಲ್ಲಿ ಮಾತ್ರವಲ್ಲ 'ಕೆಳದರ್ಜೆಗಳ ಜನ ಮೇಲ್‌ದರ್ಜೆಗಳ ಜನದ ಮೇಲೆ ಅತಿಕ್ರಮಣ ನಡೆಸಲು ಬಿಡುವ........' ಮತ್ತು 'ಭಾರತ ಒಂದೊಮ್ಮೆ ಸುವರ್ಣಯುಗ ಕಂಡಿತ್ತು' ಎಂಬ ಪದಪುಂಜಗಳಲ್ಲಿಯೂ ಆಳುವ ವರ್ಗಗಳ ದೃಷ್ಟಿಯನ್ನು ಇಡೀ ಸಮಾಜದ ದೃಷ್ಟಿಕೋನ ಎಂದು ತಪ್ಪಾಗಿ ಗ್ರಹಿಸಿ ಯೋಚಿಸುವ ಮಧ್ಯಮವರ್ಗೀಯ ಸುಧಾರಣಾವಾದೀ ದೃಷ್ಟಿ ಕಂಡುಬರುತ್ತದೆ. ಜಾತಿಯ ಬಗ್ಗೆ ಅತೀವ ಕಳಕಳಿಯಿಂದ ಮಾತನಾಡುವ ಲೋಹಿಯಾರದ್ದು ಜಾತಿಯ ಬಗ್ಗೆ ಕೇವಲ ಸುಧಾರಣಾವಾದೀ ನಿಲುವು ಎಂಬುದನ್ನು ಜಾತಿವಿನಾಶಕ್ಕೆ ಅವರ ಕಾರ್ಯಕ್ರಮಗಳನ್ನು ಅಧ್ಯಯನ ಮಾಡಿದಾಗ ಮನಗಾಣಬಹುದು.

ಜಾತಿ ನಿರ್ಮೂಲನಕ್ಕಾಗಿ ಲೋಹಿಯಾ ಈ ನಾಲ್ಕು ಕಾರ್ಯಕ್ರಮಗಳನ್ನು ರೂಪಿಸಿದ್ದಾರೆ.[49]

(i) ಅಧ್ಯಯನ, ಚರ್ಚೆ, ವಿಚಾರ ಸಂಕಿರಣ ಮತ್ತು ಇತರ ಸಮ್ಮೇಳನಗಳ ಮೂಲಕ ಭಾರತದ ಸಂಸ್ಕೃತಿ, ಜೀವನ, ಚಿಂತನೆಯಲ್ಲಿ ಜಡತ್ವವನ್ನು ಮತ್ತು ಜಾತಿಯನ್ನು ಹುಟ್ಟಿಸಿರುವ ಅಂಶಗಳನ್ನು ಬಯಲಿಗೆಳೆಯಬೇಕು.

---

48. ಡಾ॥ ಕೊ ಸಾಂಬಿಯವರ An Introduction to Indian History ಯ ಪುಟ 100 ರಲ್ಲಿನ ಉದ್ಧರಣೆಯಿಂದ.

49. The Caste System, ಪುಟ 113.

(ii) ಧರ್ಮವನ್ನು ಮತ್ತು ಅದರ ಕಾರ್ಯವಿಧಾನಗಳನ್ನು ಜಾತಿಯ ಸೋಂಕಿನಿಂದ ಶುದ್ಧಗೊಳಿಸಬೇಕು. ಅಂತರ್ಜಾತಿ ವಿವಾಹ ಮಾತ್ರ ಅಂತಿಮವಾಗಿ ಜಾತಿಯನ್ನು ನಿರ್ಮೂಲಮಾಡುತ್ತದೆ. ಆದ್ದರಿಂದ ವೈಜ್ಞಾನಿಕ ಅಧ್ಯಯನ ಮತ್ತು ಸೃಜನ ಕಲೆಗಳ ಮೂಲಕ ಆ ಬಗ್ಗೆ ಪ್ರಚಾರ ನಡೆಸಬೇಕು. ಕೂಡಲೇ ಈಡೇರಬಹುದಾದ ಉದ್ದೇಶಗಳಾದ ಸಹಭೋಜನ ಇತ್ಯಾದಿಗಳ ಬಗ್ಗೆ ಪ್ರಯತ್ನಗಳನ್ನು ಕ್ರೋಢೀಕರಿಸಬೇಕು.

(iii) ಸರಕಾರ, ರಾಜಕೀಯ ಪಕ್ಷಗಳು, ವ್ಯಾಪಾರ ಮತ್ತು ಸೇನೆಯಲ್ಲಿ ಸಂಪ್ರದಾಯದ ಮೂಲಕವಾಗಲೀ, ಕಾನೂನಿನ ಮೂಲಕವಾಗಲೀ ಶೇ. 60 ಹುದ್ದೆಗಳನ್ನು ಹೆಂಗಸರು, ಶೂದ್ರರು, ಹರಿಜನರು, ಆದಿವಾಸಿಗಳು ಹಾಗೂ ಅಲ್ಪಸಂಖ್ಯಾತ ಧರ್ಮಗಳ ಕೆಳಜಾತಿಯವರು ಇವರಿಗೇ ಕೊಡಬೇಕು. ಇದನ್ನು ಕೆಲವೇ ಪ್ರಬಲ ಹಿಂದುಳಿದ ಗುಂಪುಗಳು ದೋಚಿಕೊಳ್ಳದಂತೆ ಎಚ್ಚರಿಕೆ ವಹಿಸಬೇಕು.

( (ಈ ಮೇಲಿನ ಮೂರು ಉದ್ದೇಶಗಳಿಗಾಗಿ ರೂಪಿಸಿದ) ಸಂಘ, ಚುನಾವಣೆಗಳಲ್ಲಿ ಭಾಗವಹಿಸುವ ಮೂಲಕ ತನ್ನ ಚಟುವಟಿಕೆ ನಡೆಸುವುದಿಲ್ಲ. ಆದರೆ ಸೂಕ್ತ ಶಕ್ತಿ ಪಡೆದಾಗ, ಸೂಕ್ತ ನಿರ್ಧಾರದ ನಂತರ ಯಾವುದಾದರೊಂದು ರಾಜಕೀಯ ಪಕ್ಷದ ಅಂಗ ಸಂಸ್ಥೆಯಾಗಬಹುದು ಅಥವಾ ತಾನೇ ಒಂದು ರಾಜಕೀಯ ಪಕ್ಷವಾಗಬಹುದು.

ಲೋಹಿಯಾ ಜಾತಿಯನ್ನು ಒಂದು ಸಾಮಾಜಿಕ ವಿಮೆಯೆಂದಿದ್ದಾರೆ. ಅದು ನಿಜವೂ ಹೌದು. ಆದರೆ ಮೇಲಿನ ಕಾರ್ಯಕ್ರಮಗಳಲ್ಲಿ ಅದನ್ನು ಎಲ್ಲೂ ಗಮನಕ್ಕೆ ತಂದುಕೊಂಡಂತಿಲ್ಲ. ಜಾತಿಪದ್ಧತಿ ನಿಜವಾಗಿಯೂ ಸಾಮಾಜಿಕ ಭದ್ರತೆಯನ್ನು ಅಥವಾ ಅಂತಹ ಭ್ರಮೆಯನ್ನಾದರೂ ಕೊಟ್ಟಿದರೆ ಅದಕ್ಕೆ ಆವಕಾಶ ಮಾಡಿಕೊಟ್ಟ ಸಾಮಾಜಿಕ ವ್ಯವಸ್ಥೆಯನ್ನು ಕಿತ್ತೆಸೆದು ಬೇರೊಂದು ಪರ್ಯಾಯ ವ್ಯವಸ್ಥೆಯ ಬಗ್ಗೆ ಹೇಳುವುದು ಅಗತ್ಯವಾಗುತ್ತದೆ. ಮೇಲಿನ ಕಾರ್ಯಕ್ರಮಗಳಲ್ಲಿ ಆ ಬಗ್ಗೆ ಪ್ರಸ್ತಾಪವಿಲ್ಲ. ಜಾತಿಪದ್ಧತಿಯನ್ನು ಇಷ್ಟು ದೀರ್ಘಕಾಲ ಸಾಕಿ-ಸಲಹಿರುವ ವ್ಯವಸ್ಥೆಯನ್ನೇ ಕಿತ್ತು ಹಾಕದೆ ಜಾತಿವಿನಾಶ ಸಾಧ್ಯವಾದೀತೇ ?

ಲೋಹಿಯಾರ ಈ ಕಾರ್ಯಕ್ರಮಗಳು ಕೆಲವು ಸೀಮಿತ ವಲಯಗಳಲ್ಲಿ ಸಣ್ಣ ಅಲೆಗಳನ್ನು ಎಬ್ಬಿಸಬಹುದೇ ಹೊರತು ಸಾವಿರಾರು ವರ್ಷಗಳಿಂದ ಬೇರು ಬಿಟ್ಟ ವ್ಯವಸ್ಥೆಯ ಮೂಲಕ್ಕೇ ಏಟು ಕೊಡುವುದಿಲ್ಲ. ಅಧ್ಯಯನ, ಚರ್ಚೆ, ವಿಚಾರಸಂಕಿರಣಗಳು ಅಗತ್ಯವಾದರೂ ಅವು ಜನಸಾಮಾನ್ಯರ ದಿನನಿತ್ಯದ ಹೋರಾಟಗಳೊಂದಿಗೆ ಸಂಬಂಧ ಹೊಂದದೆ ಕೇವಲ ಮಧ್ಯಮವರ್ಗದವರ, ಬುದ್ಧಿಜೀವಿಗಳ ಹವ್ಯಾಸ ಮಾತ್ರವಾಗಿ

ಉಳಿಯುತ್ತವೆ. ಸಹಭೋಜನದ ವ್ಯಾಪ್ತಿಯೂ ಸೀಮಿತ. ಉಳ್ಳವರ ಮತ್ತು ಇಲ್ಲದವರ ನಡುವಿನ ಕಂದಕವನ್ನು ಶಾಶ್ವತವಾಗಿ ಅದು ಮುಚ್ಚಲಾರದು.

ಜಾತಿಯೆಂದರೆ ತನ್ನೊಳಗೆ ಮಾತ್ರ ವಿವಾಹ ಸಂಬಂಧವಿರುವ (endogamous) ಒಂದು ಸಾಮಾಜಿಕ ಗುಂಪಾಗಿರುವುದರಿಂದ ಜಾತಿವಿನಾಶದಲ್ಲಿ ಅಂತರ್ಜಾತಿ ವಿವಾಹಗಳ ಮಹತ್ವವನ್ನು ಯಾರೂ ಅಲ್ಲಗಳೆಯಲು ಸಾಧ್ಯವಿಲ್ಲ. ಆದರೆ 'ಜನ್ಮತಃ ವರ್ಗೀಕರಣ, ಮತದಿಂದ ಮನ್ನಣೆ ಜಾತಿಯ ಅತ್ಯಗತ್ಯ ಗುಣವಲ್ಲ' ಎಂದೆನ್ನುವ ಲೋಹಿಯಾರವರೇ 'ಅಂತರ್ಜಾತಿ ವಿವಾಹ ಮಾತ್ರ ಅಂತಿಮವಾಗಿ ಜಾತಿ ನಿರ್ಮೂಲನ ಮಾಡುತ್ತದೆ' ಎಂದು ಹೇಗೆ ಹೇಳಲು ಸಾಧ್ಯ ? ಅವರ ಸಿದ್ಧಾಂತವನ್ನು ಸರಿಯೆಂದಿಟ್ಟುಕೊಂಡರೆ ಅಂತರ್ಜಾತಿ ವಿವಾಹಗಳು ಜಾತಿಯ ಒಂದು ರೂಪವನ್ನು ಕೊನೆಗೊಳಿಸಬಹುದೇ ಹೊರತು ರಕ್ಷಾತ್ಮಕ, ಸೃಜನಾತ್ಮಕ ಇತ್ಯಾದಿಯಾಗಿ ಅವರು ವಿವರಿಸುವ ಜಾತಿಪದ್ಧತಿಯ ಎಲ್ಲಾ ರೂಪಗಳನ್ನು 'ಅಂತಿಮವಾಗಿ' ಕೊನೆಗೊಳಿಸಲಾರದು. ಸಮಾಜದ ಅಸಮಾನತೆಗಳನ್ನು rationalise ಮಾಡಿ ಅವುಗಳಿಗೊಂದು ಪಾವಿತ್ರ್ಯವನ್ನು ಕೊಡುವುದೇ ತನ್ನ ಕೆಲಸವೆಂದು ಭಾವಿಸಿದಂತಿರುವ ಧರ್ಮವನ್ನು ಶುದ್ಧಗೊಳಿಸುವ ಪ್ರಯತ್ನವೂ ಗಾಳಿಗುದ್ದಾಟಕ್ಕಿಂತ ಹೆಚ್ಚು ಪ್ರಯೋಜನಕಾರಿಯಲ್ಲ.

ಸಾವಿರಾರು ವರ್ಷಗಳ ಕಾಲ ಜಾತಿಪದ್ಧತಿಯಿಂದಾಗಿ ಕೆಳಜಾತಿಯವರಲ್ಲಿ ಉಂಟಾಗಿರುವ ಅಸಮರ್ಥತೆಯನ್ನು ಹೋಗಲಾಡಿಸಿ ಸಮಾಜಕ್ಕೆ ಹೊಸ ಜೀವ ತುಂಬಬೇಕಾದರೆ ವಿಶೇಷ ಅವಕಾಶದ ಅಂದರೆ ಮೀಸಲಾತಿಯ ಧೋರಣೆ ಅಗತ್ಯ. ಚರ್ಚೆ ನಡೆಯಬೇಕಾದ್ದು ಈ ಧೋರಣೆ ಬೇಕೇ ಬೇಡವೇ ಎಂದಲ್ಲ ; ಜಾತಿವಿನಾಶದ ಕಾರ್ಯಕ್ರಮದಲ್ಲಿ ಈ ಧೋರಣೆಯ ಸರಿಯಾದ ಪಾತ್ರ ಏನು ಎಂಬುದರ ಮೇಲೆ. ಲೋಹಿಯಾರ ಜಾತಿವಿನಾಶ ಕಾರ್ಯಕ್ರಮದ ಇತರ ಅಂಶಗಳ ಬಗ್ಗೆಯೂ ಇದನ್ನೇ ಹೇಳಬಹುದು.

ಭಾರತದ ಶೇ. ಅರವತ್ತು ಅಲ್ಲದಿದ್ದರೂ ಶೇ 15 ರಿಂದ ಶೇ 50 ರವರೆಗಿನ ಮೀಸಲಾತಿ ಪದ್ಧತಿಯ 30 ವರ್ಷಗಳ ಅನುಭವವನ್ನು ಅಧ್ಯಯನ ಮಾಡಿದ ಇಬ್ಬರು ಸಂಶೋಧಕರ ತೀರ್ಮಾನಗಳನ್ನು ಗಮನಿಸೋಣ. 1962-71ರ ನಡುವೆ ಪರಿಶಿಷ್ಟ ಜಾತಿಯ ಲೋಕ ಸಭಾ ಸದಸ್ಯರ ಸಾಮಾಜಿಕ ಹಿನ್ನಲೆಯ ಒಂದು ಅಧ್ಯಯನದ [50] ಪ್ರಕಾರ ಪರಿಶಿಷ್ಟ ಜಾತಿ (ಪ. ಜಾತಿ) ಯ ಲೋಕಸಭಾ ಸದಸ್ಯರು ಮತ್ತು ಪ. ಜಾತಿಯ ಜನಸಾಮಾನ್ಯರ ನಡುವಿನ ಅಂತರ ಇತರ ಸದಸ್ಯರು ಮತ್ತು ಅವರು ಪ್ರತಿನಿಧಿಸುವ ಜನರ ನಡುವಿನ ಅಂತರಕ್ಕಿಂತ ಹೆಚ್ಚಾಗಿದೆ. ಮೂರನೇ ಲೋಕಸಭೆ (1962-67)

50. Economic and Political Weekly, 16 ಸೆಪ್ಟಂ. 78, ಪುಟ 1603-8

ಯಲ್ಲಿ ಪ. ಜಾತಿಯ ಲೋಕಸಭಾ ಸದಸ್ಯರು ಮತ್ತು ಇತರ ಲೋಕಸಭಾ ಸದಸ್ಯರ ಸಾಮಾಜಿಕ ಹಿನ್ನೆಲೆಯಲ್ಲಿ ಗಮನಾರ್ಹ ವ್ಯತ್ಯಾಸ ಇತ್ತು. ಐದನೇ ಲೋಕಸಭೆಗೆ ಬರುತ್ತಿದ್ದಂತೆ ಈ ವ್ಯತ್ಯಾಸ ಬಹಳ ಕಡಿಮೆಯಾಗಿದೆ. ಹೀಗೇ ಮುಂದುವರಿದರೆ ಪ. ಜಾತಿಯ ಲೋಕಸಭಾ ಸದಸ್ಯರು ಮತ್ತು ಇತರ ಲೋಕಸಭಾ ಸದಸ್ಯರ ನಡುವೆ ವ್ಯತ್ಯಾಸವೇ ಉಳಿಯಲಿಕ್ಕಿಲ್ಲ. ಆದರೆ ಪ. ಜಾತಿಯ ಜನಸಮೂಹ ಮತ್ತು ಇತರ ಜನ ಸಮೂಹದ ನಡುವಿನ ಅಂತರ ಇದಕ್ಕೆ ಅನುಗುಣವಾಗಿ ಬದಲಾಗಿಲ್ಲ. ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಪ. ಜಾತಿಯ ಲೋಕಸಭಾ ಸದಸ್ಯರ ಸದಸ್ಯತನದ ದೀರ್ಘತೆ ಉಳಿದ ಸದಸ್ಯರಿಗಿಂತ ಹೆಚ್ಚಾಗಿದೆ.

ಎರಡನೇ ಅಧ್ಯಯನ [51] ವಿವಿಧ ಬಗೆಯ ಮೀಸಲಾತಿಗಳಿಂದ ಯಾರಿಗೆ ಎಷ್ಟು ಪ್ರಯೋಜನ (ಅಥವಾ 'ತೊಂದರೆ') ಆಗಿದೆ ಎಂಬುದನ್ನು ಕುರಿತಾಗಿದೆ. ಇದರಲ್ಲಿ ಮೀಸಲಾತಿಯ ಪ್ರಯೋಜನಗಳನ್ನು ಶಿಷ್ಟ (elite) ದರ್ಜೆಯ ಪ್ರಯೋಜನಗಳು, ಮಧ್ಯಮದರ್ಜೆಯ ಪ್ರಯೋಜನಗಳು ಹಾಗೂ ಕೆಳದರ್ಜೆಯ ಪ್ರಯೋಜನಗಳು ಎಂದು ಮೂರು ಬಗೆಯದಾಗಿ ವಿಂಗಡಿಸಲಾಗಿದೆ. ಶಿಷ್ಟ ದರ್ಜೆಯ ಪ್ರಯೋಜನಗಳೆಂದರೆ ಮೊದಲನೇ ಮತ್ತು ಎರಡನೇ ದರ್ಜೆಯ ಸರಕಾರಿ ಅಧಿಕಾರಿಗಳ ಹುದ್ದೆಗಳು, ಉಚ್ಚ ಶಿಕ್ಷಣಾಲಯಗಳಿಗೆ, ವಿಶೇಷವಾಗಿ ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜು ಗಳಿಗೆ ಪ್ರವೇಶ, ಶಾಸನ ಸಭೆಗಳ ಸದಸ್ಯತ್ವ, ಉಚ್ಚ ಹುದ್ದೆಗಳಿಗೆ ನೇಮಕಾತಿ ಇತ್ಯಾದಿ. ಮೂರನೇ ದರ್ಜೆಯ ಸರಕಾರೀ ಹುದ್ದೆಗಳು, ಹೈಸ್ಕೂಲ್ ಮತ್ತು ಕಾಲೇಜು ಶಿಕ್ಷಣಕ್ಕೆ ಸ್ಕಾಲರ್‌ಶಿಪ್ ಇವು ಮಧ್ಯಮದರ್ಜೆಯ ಪ್ರಯೋಜನಗಳು. ನಾಲ್ಕನೇ ದರ್ಜೆ ಸರಕಾರೀ ಹುದ್ದೆಗಳು, ಪ್ರಾಥಮಿಕ, ಮಾಧ್ಯಮಿಕ ಶಾಲೆಗಳ ಶುಲ್ಕ ರಿಯಾಯ್ತಿ, ಉಚಿತ ಪುಸ್ತಕಗಳು, ಉಚಿತ ಮಧ್ಯಾಹ್ನದ ಊಟ ಮತ್ತು ಮನೆಕಟ್ಟಲು, ಕೊಳ್ಳಲು ಸಾಲ ಅಥವಾ ಸಹಾಯಧನ ನೀಡುವ ಹಲವು ಆರ್ಥಿಕ ಕಾರ್ಯಕ್ರಮಗಳು ಇವು ಕೆಳದರ್ಜೆಯ ಪ್ರಯೋಜನಗಳು. ಈ ಅಧ್ಯಯನದಿಂದ ಕಂಡುಬಂದ ಅಂಶವೆಂದರೆ ಮಧ್ಯಮ ದರ್ಜೆಯ ಪ್ರಯೋಜನಗಳನ್ನು ಬಿಟ್ಟು ಉಳಿದೆರಡೂ ದರ್ಜೆಯ ಪ್ರಯೋಜನಗಳು ನಿಜ ವಾದ ಅರ್ಥದಲ್ಲಿ ಪ್ರಯೋಜನಗಳಾಗಿಲ್ಲ ಎಂಬುದು. ಪರಿಶಿಷ್ಟ ಜಾತಿಯ ಕೆಳವರ್ಗ ದವರಿಗೆ (ಇವರ ಸಂಖ್ಯೆಯೇ ಅತೀ ಹೆಚ್ಚು) 'ಪ್ರಯೋಜನ'ಗಳ ಬದಲು ನಷ್ಟವೇ ಆಗಿದೆ. ಮಧ್ಯಮ ದರ್ಜೆಯ ಪ್ರಯೋಜನಗಳು ಅವನ್ನು 'ನೀಡುವ' ಸ್ಥಾನದಲ್ಲಿರುವ ರಾಜಕಾರಣಿಗಳಿಗೆ ತಮ್ಮ ಬೆಂಬಲಿಗರ ಸಂಖ್ಯೆಯನ್ನು ಮತ್ತು ಆ ಮೂಲಕ ಅಧಿಕಾರ ರಾಜಕಾರಣದಲ್ಲಿ ತಮ್ಮ ಚೌಕಾಶಿ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ಇನ್ನಷ್ಟು ಹೆಚ್ಚಿನ ಪ್ರಯೋಜನ ನೀಡಿವೆ. ಮೀಸಲಾತಿ ಪದ್ಧತಿಯ ಒಂದು ದುರ್ಬಲ ಅಂಶ ಈಗ ಸ್ಪಷ್ಟ

51. Economic & Political Weekly, 7 ಏಪ್ರಿಲ್ '79, ಪುಟ 661-69

ವಾಗುತ್ತಿದೆ. ಅದೆಂದರೆ ಈ ಪದ್ಧತಿ ಹಿಂದುಳಿದವರಲ್ಲಿ ಒಂದು ರೀತಿಯ ಸಂತೃಪ್ತ ಮನೋಭಾವವನ್ನು, ತಮ್ಮ ಹಿಂದುಳಿದಿರುವಿಕೆಯ ಮೂಲಭೂತ ಕಾರಣದ ಬಗ್ಗೆ ಮತ್ತು ಅದಕ್ಕೆ ಅವಕಾಶ ಮಾಡಿಕೊಟ್ಟ ವ್ಯವಸ್ಥೆಯ ಬಗ್ಗೆ ಸಿಟ್ಟಿನ ಬದಲು ವ್ಯವಸ್ಥೆಯೊಳಗೇ ತಮ್ಮ (ವ್ಯಕ್ತಿಗತ) ಉನ್ನತಿ ಸಾಧ್ಯ ಎಂಬ ಭ್ರಮೆಯನ್ನು ಹುಟ್ಟಿಸಿದೆ. ಇನ್ನೊಂದೆಡೆ, ಇದುವರೆಗೆ ಈ ಪದ್ಧತಿಯ ಬಗ್ಗೆ ತಟಸ್ಥರಾಗಿದ್ದ ಇತರ ಜನಸಾಮಾನ್ಯರಲ್ಲಿ ಇದರಿಂದಾಗಿ ಅತೃಪ್ತಿ ಬೆಳೆಯುತ್ತಿದೆ. "ಮೀಸಲಾತಿಯ ಬೆಲೆಯನ್ನು ನಾವು ತೆರಬೇಕಾಗಿದೆ" ಎಂಬ ತಪ್ಪು ಗ್ರಹಿಕೆ ಹರಡುತ್ತಿದೆ. ಎಲ್ಲರ ಅಗತ್ಯಗಳನ್ನು ಈಡೇರಿಸಲಾಗದ, ಕೇವಲ ಕೆಲವರ ಲಾಭಕ್ಕಾಗಿಯೇ ಇರುವ ಈಗಿನ ಆರ್ಥಿಕ ವ್ಯವಸ್ಥೆಯ ಅಸಮರ್ಥತೆ ಹೆಚ್ಚೆಚ್ಚು ತೀವ್ರವಾಗುತ್ತಾ ಹೋದಂತೆ ಈ ತಪ್ಪುಗ್ರಹಿಕೆಯನ್ನು ನಿವಾರಿಸುವುದು ಕಷ್ಟದ ಕೆಲಸವಾಗುತ್ತಿದೆ. ಮೀಸಲಾತಿ ಪದ್ಧತಿಯ ಪ್ರಯೋಜನಗಳನ್ನು ಈಗಿನ ವ್ಯವಸ್ಥೆ ತುಂಬಾ ಸೀಮಿತಗೊಳಿಸುತ್ತದೆ ಎಂಬುದು ನಿಸ್ಸಂಶಯ. ಆದ್ದರಿಂದ ಅದು ಪರಿಶಿಷ್ಟ ಜಾತಿಯ ಒಂದು ಸಣ್ಣ ಸಮೂಹವನ್ನು ಮಾತ್ರ ತಟ್ಟಬಲ್ಲದು. ಲೋಹಿಯಾ ಹೇಳುವ 'ಆಂತರಿಕ ಸಮೀಪೀಕರಣ'ದ ಪ್ರಥಮ ಹೆಜ್ಜೆಯೆನ್ನಬಹುದಾದ ಮೀಸಲಾತಿ ಪದ್ಧತಿ (ಅವರಿಗೆ ಇಷ್ಟವಿಲ್ಲದಿದ್ದರೂ) ತನ್ನ ಉದ್ದೇಶಕ್ಕೆ ತಾನೇ ಅಡ್ಡಿಯಾಗುತ್ತದೆ. ಹೀಗೆ ಆಗದಿರಬೇಕಾದರೆ ಎಲ್ಲಾ ಬಡವರ ಹಿತಾಸಕ್ತಿಗಳಿಗೆ ಆದ್ಯತೆ ನೀಡುವ ಆರ್ಥಿಕ ವ್ಯವಸ್ಥೆಯೊಂದು ಬರಬೇಕು. ಜಾತಿ ಪದ್ಧತಿಯನ್ನು ವಿಮುಖಗೊಳಿಸಿದ ಸಮಾಜ ವ್ಯವಸ್ಥೆ ಬದಲಾಗಬೇಕು. ಇಲ್ಲವಾದರೆ ಈಗ ಆಗಿರುವಂತೆ ಬಡವರು ಒಗ್ಗಟ್ಟಾಗದಂತೆ ನೋಡಿಕೊಳ್ಳಲು ಆಳುವ ವರ್ಗಗಳ ಬತ್ತಳಿಕೆಯಲ್ಲಿರುವ ಕೊನೆಯ ಅಸ್ತ್ರವಾಗಿ ಮೀಸಲಾತಿ ಪದ್ಧತಿಯ ಉಪಯೋಗವಾಗುವುದನ್ನು ತಪ್ಪಿಸಲು ಸಾಧ್ಯವಿಲ್ಲ,

ಸರಕಾರಿಯೇತರ ವಲಯಗಳಲ್ಲಿ ಮೀಸಲಾತಿಗೆ ಪ್ರಾಮಾಣಿಕ ಅಂಗೀಕಾರ ದೊರೆಯುವುದೆಂದು ಊಹಿಸಲೂ ಸಾಧ್ಯವಿಲ್ಲ. ಸ್ವಲಾಭಕ್ಕಾಗಿಯೇ ವ್ಯಾಪಾರ, ಕೈಗಾರಿಕೆಯೆನ್ನುವ ವ್ಯಾಪಾರೀ ಹಾಗೂ ಕೈಗಾರಿಕೋದ್ಯಮಿಗಳ ವರ್ಗ, ಅವರ ನೀತಿಯನ್ನು ಸರಿ ಎಂದು ಒಪ್ಪುವ ಮತ್ತು ಸಮರ್ಥಿಸುವ ಸಮಾಜ ವ್ಯವಸ್ಥೆಯಿರುವವರೆಗೂ ಮೀಸಲಾತಿ ಪದ್ಧತಿಯನ್ನು ಅವರು ಒಪ್ಪುತ್ತಾರೆಂದು ನಿರೀಕ್ಷಿಸುವುದು ನಿರರ್ಥಕ.

ಶೇ. ಅರವತ್ತು ಮೀಸಲಾತಿಯನ್ನು ಹಿಂದುಳಿದ ಜಾತಿಗಳಲ್ಲಿನ ಪ್ರಬಲ ಗುಂಪುಗಳು ದೋಚಿಕೊಳ್ಳದಂತೆ ಎಚ್ಚರಿಕೆ ವಹಿಸಬೇಕು (ಹೇಗೆ ಎಂದು ಹೇಳಿಲ್ಲವೆಂಬುದು ಬೇರೆ ಮಾತು) ಎನ್ನುವಾಗ ಲೋಹಿಯಾ ಜಾತಿಹೋರಾಟದ ಒಂದು ಅನಪೇಕ್ಷಿತ ಪರಿಣಾಮವನ್ನು ಗಮನಿಸಿದ್ದಾರೆ. ಮಹಾರಾಷ್ಟ್ರದ ರಾಜಕೀಯ ಚಿತ್ರದ ಉದಾಹರಣೆಯೊಂದಿಗೆ ಇದನ್ನು ಅವರೇ ಚೆನ್ನಾಗಿ ವಿವರಿಸಿದ್ದಾರೆ.[52]

---

52. The Caste System, ಪುಟ 89-90

"1930 ರ ವರೆಗೆ ಮಹಾರಾಷ್ಟ್ರದ ರಾಜಕೀಯ ರಂಗದ ಹಿನ್ನೆಲೆ ಬಹಳ ಸರಳವಾಗಿತ್ತು. ಅದೆಂದರೆ ಬ್ರಾಹ್ಮಣ ಮತ್ತು ಇತರರ ನಡುವಿನ ಪೈಪೋಟಿ. ಅನಂತರದ 25 ವರ್ಷಗಳಲ್ಲಿ ಈ ಆಶ್ಚರ್ಯಕರ ಸರಳತೆ ಬದಲಿಸಿಲ್ಲ. ಒಂದೇ ವ್ಯತ್ಯಾಸವೆಂದರೆ ಈಗಿನ (1958 ರ) ಪೈಪೋಟಿ ಮರಾಠಾ ಮತ್ತು ಇತರರ ಮಧ್ಯೆ ಅಷ್ಟೆ........ಮರಾಠ ಜಾತಿಯವರು ಬ್ರಾಹ್ಮಣ ಜಾತಿಯ ವಿರುದ್ಧ ಕೆಳಜಾತಿಗಳ ಬಂಡಾಯವನ್ನು ತಮ್ಮ ಪ್ರಾಬಲ್ಯ ಹೆಚ್ಚಿಸಿಕೊಳ್ಳಲು ಉಪಯೋಗಿಸಿದರೇ ವಿನಃ ಜಾತಿಯನ್ನು, ಅದರೊಂದಿಗೇ ಬರುವ ಅನ್ಯಾಯವನ್ನು ಕೊನೆಗೊಳಿಸಲು ಉಪಯೋಗಿಸಲಿಲ್ಲ. ಪ್ರತಿಸಲವೂ ಕೆಳಜಾತಿಗಳ ಬಂಡಾಯವನ್ನು ಯಾವುದಾದರೊಂದು ಜಾತಿಯ ಉನ್ನತಿಗೆ ದುರುಪಯೋಗಪಡಿಸಲಾಗಿದೆಯೋ ಹೊರತು ಇಡೀ ಕಟ್ಟಡವನ್ನು ನೆಲಸಮ ಮಾಡಲಿಕ್ಕಲ್ಲ."

ಜಾತಿ-ವರ್ಗದ ತುಯ್ದಾಟದ ಸಿದ್ಧಾಂತದ ಮೂಲಕ ತಿಳಿಯಲು ಪ್ರಯತ್ನಿಸಿದಾಗ ಮಹಾರಾಷ್ಟ್ರದ ರಾಜಕೀಯರಂಗದ ಈ 'ಸರಳತೆ' ಆಶ್ಚರ್ಯಕರವಾಗಿ ಕಾಣುತ್ತದೆ. ಆದರೆ ಜಾತಿಪ್ರಜ್ಞೆಯೊಂದೇ ಬಂಡಾಯದ ಮೂಲದ್ರವ್ಯವಾದಾಗ ಅಥವಾ ವರ್ಗಹಿತಾಸಕ್ತಿಗೆ ಜಾತಿಯ ವೇಷ ತೊಡಿಸಿದಾಗ ಈ 'ಸರಳತೆ' ಸ್ವಾಭಾವಿಕ.[53] ಲೋಹಿಯಾರೇ ಹೇಳುವ ಮೇಲ್ಜಾತಿಗಳಲ್ಲಿ ನಿಜವಾದ ಮೇಲ್ಜಾತಿಯವರೇನ್ನಬಹುದಾದ ಅಲ್ಪಸಂಖ್ಯಾತ ಗುಂಪಿನ ಬಗ್ಗೆ ಅದೇ ಜಾತಿಗಳ ಬಹುಸಂಖ್ಯಾತ ಬಡವರು ಹೊಂದಿರುವ ಭ್ರಮೆಯನ್ನು ಜಾತಿಹೋರಾಟ ನೀಗಿಸಲಾರದು. ಬದಲಾಗಿ ಅದು ಇನ್ನಷ್ಟು ಹೆಚ್ಚಾಗಬಹುದು. ಈ ಬಹು ಸಂಖ್ಯಾತ ಬಡ ಮೇಲ್ಜಾತಿಗರು ಕೆಳಜಾತಿಗಳ ತಮ್ಮ ವರ್ಗಬಂಧುಗಳೊಂದಿಗೆ ಸೇರಿ ನಡೆಸುವ ಹೋರಾಟದಲ್ಲಿ ಮಾತ್ರ ಈ ಭ್ರಮೆಯನ್ನು ನೀಗಿಸುವ ಅವಕಾಶ ದೊರೆಯಬಹುದು.

ಲೋಹಿಯಾರವರು ಜಾತಿಪದ್ಧತಿಯನ್ನು ಜಗತ್ತಿನ ಅತೀ ದೊಡ್ಡ ವಿಮೆಯಾಗಿಸಿದ ವ್ಯವಸ್ಥೆಯನ್ನು ಬದಲಿಸುವ ಕಾರ್ಯಕ್ರಮದ ಬಗ್ಗೆ ಸ್ಪಷ್ಟವಾಗಿ ಏನನ್ನೂ ಹೇಳದೇ ಇರುವುದರಿಂದ ಮೇಲಿನ ಅವರ ಕಾರ್ಯಕ್ರಮಗಳು ಸದ್ಯದ ವ್ಯವಸ್ಥೆಗೆ ಭಂಗತರದಂತೆ ಬಯಸುವ ಸುಧಾರಣೆಗಳು ಮಾತ್ರ ಆಗುತ್ತವೆ. ಇವು ಕೈಗೂಡುವುದಾದರೆ, ನಿಸ್ಸಂದೇಹವಾಗಿಯೂ ಮಹತ್ವದ ಸುಧಾರಣೆಗಳು. ಆದರೆ ವ್ಯವಸ್ಥಾಗತ ಅನ್ಯಾಯ, ಅಸಮಾನತೆಗಳು, ತೊಲಗಬೇಕಾದರೆ ಈಗ ಅವುಗಳ ಬುಡವನ್ನೇ ಅಲುಗಾಡಿಸಬೇಕು. ಯಾವುದೇ ಸುಧಾರಣೆ ಸುಧಾರಣೆಯಾಗಿ ಈ ಕೆಲಸ ಮಾಡಲಾರದು. ವ್ಯವಸ್ಥೆಯ ಬದಲಾವಣೆಯಿಂದ ಮಾತ್ರ ಅದು ಸಾಧ್ಯ. ಇಲ್ಲವಾದರೆ ಆಂತರಿಕ ಸಮೀಕರಣ, ಮಾನವ

53. ಮಹಾರಾಷ್ಟ್ರದ ರಾಜಕೀಯ ರಂಗದ ಈ 'ಸರಳತೆ'ಯನ್ನು ಇನ್ನೊಂದು ವಿಶ್ಲೇಷಣೆಗಾಗಿ Economic & Poltical Weekly 1379 ರ ವಾರ್ಷಿಕ ಸಂಚಿಕೆಯಲ್ಲಿ ಬಿ.ಟಿ. ರಣದಿವೆ (ಪುಟ 337-349) ಮತ್ತು ನಳಿನಿ ಪಂಡಿತ್ (ಪುಟ 425-437) ಲೇಖನಗಳನ್ನು ನೋಡಿ.

ಲೋಕದ ನಿಕಟಗಮನ, ಪರಿಪೂರ್ಣದಕ್ಷತೆ, ಜಗದ್ರಾಜ್ಯ ಕಲ್ಪನೆ ಇವು ದೂರದ ಮೋಹಕ ಕನಸುಗಳಾಗಿಯೇ ಉಳಿಯುತ್ತವೆ.

ಲೋಹಿಯಾ ತಮ್ಮನ್ನು ಸೈದ್ಧಾಂತಿಕವಾಗಿ ಉದಾರವಾದಿ ಕಾರ್ಯದಲ್ಲಿ ತೀವ್ರವಾದಿ ಎಂದು ಹೇಳಿಕೊಂಡಿದ್ದಾರೆ. ಜಾತಿಸಂಬಂಧೀ ವಿಚಾರಧಾರೆ ಮಟ್ಟಿಗಂತೂ ಇದು ನಿಜ. ಆದರೆ ಸಮಸ್ಯೆಯೆಂದರೆ ಸಿದ್ಧಾಂತ ಮತ್ತು ಕಾರ್ಯದಲ್ಲಿ ಈ ವ್ಯತ್ಯಾಸ ಏಕಿದೆಯೆಂಬುದು. ಜಾತಿಪದ್ಧತಿಯ ನಿರ್ಮೂಲನದ ಬಗ್ಗೆ ಅತೀವ ಕಾತರವಿದ್ದರೂ, ಆ ಪದ್ಧತಿಯ ಬಾಹ್ಯ ಲಕ್ಷಣಗಳನ್ನು ಪ್ರಭಾವ ಪೂರ್ಣವಾಗಿ ಚಿತ್ರಿಸಿದ್ದರೂ ಈ ಕಾತರ ಮತ್ತು ಚಿತ್ರಣವನ್ನು ಸಮರ್ಥಿಸುವಂತಹ ಸ್ಪಷ್ಟತೆ, ವೈಜ್ಞಾನಿಕತೆ. ಅವರ ಸೈದ್ಧಾಂತಿಕ ವಿಶ್ಲೇಷಣೆಯಲ್ಲಿಲ್ಲ.—

"ವರ್ಗಗಳ ನಿರ್ಮೂಲನದ ಬಗ್ಗೆ ನನಗಿರುವ ಕಾತರ ಇನ್ನಾರಿಗೂ ಇರಲಿಕ್ಕಿಲ್ಲ" [54] ಎನ್ನುವ ಲೋಹಿಯಾರವರು

"ಬಹಿರಂಗದಲ್ಲಿ ರಾಷ್ಟ್ರಗಳ ನಡುವೆ, ಆಂತರಿಕವಾಗಿ ವರ್ಗಗಳ ನಡುವೆ ಹೋರಾಟವನ್ನು ಕೊನೆಗೊಳಿಸುವ ಹಾಗೆ ಸಮಸ್ತಮಾನವ ಲೋಕವೂ ತನ್ನನ್ನು ವ್ಯವಸ್ಥೆಮಾಡಿಕೊಳ್ಳಬಲ್ಲಂಥ ಭವಿಷ್ಯವನ್ನು ಬುದ್ಧಿಪೂರ್ವಕವಾಗಿ ನಿರೀಕ್ಷಿಸುವುದು ನಮಗೆ ಸಾಧ್ಯವಾಗದು" [55]

ಎಂಬ ಸೈದ್ಧಾಂತಿಕ ತೀರ್ಮಾನಕ್ಕೆ ಬರುತ್ತಾರೆ.

"ವರ್ಗ ಹೋರಾಟದ ಮುಸುಕಿನಲ್ಲಿ ಜಾತಿಗಳನ್ನು ಸೃಷ್ಟಿಸಲಾಗಿದೆ" [56] ಎಂಬ ಭಯವೂ ಅವರಿಗಿದೆ. ಇಂತಹ ಸೈದ್ಧಾಂತಿಕ ನಿಲುವು ವಾಸ್ತವಿಕತೆಗೆ ಬಂದಾಗ ಜನಸಾಮಾನ್ಯರ ಹೋರಾಟದಲ್ಲಿ ಗೊಂದಲವುಂಟು ಮಾಡುತ್ತದೆ. ಜಾತಿವರ್ಗದ ತುಯ್ದಾಟ ಮಾನವನಿಯತಿಯಾದ್ದರಿಂದ ಇದನ್ನು ಬದಲಾಯಿಸುವ ಸಾಧ್ಯತೆ ಬಗ್ಗೆ ಏನೂ ಹೇಳಲಾಗುವುದಿಲ್ಲವಾದ್ದರಿಂದ ವರ್ಗಹೋರಾಟ ಸಲ್ಲದು ; ಏಕೆಂದರೆ ಅದು ಜಾತಿಗಳನ್ನು ಸೃಷ್ಟಿಸುತ್ತದೆ ಎಂದು ಯಾರಾದರೂ ಹೇಳಿದರೆ ಅದನ್ನು ಲೋಹಿಯಾವಾದದ ಸರಳೀಕರಣ ಎಂದು ಸುಮ್ಮನೆ ತಳ್ಳಿಹಾಕುವುದು ಸಾಧ್ಯವಿಲ್ಲ. ಇಂತಹ ನಿಲುವು ಆಳುವ ವರ್ಗಗಳಿಗೆ ಎಷ್ಟೊಂದು ಸಹಕಾರಿಯಾಗಬಹುದೆಂದು ಯೋಚಿಸಿದರೆ ಲೋಹಿಯಾವಾದ ಸೈದ್ಧಾಂತಿಕ ನೆಲೆಯಲ್ಲಿ ಉಂಟುಮಾಡುವ ಗೊಂದಲ ತಿಳಿಯುತ್ತದೆ.

ಭಾರತದ ಜಾತಿಯ ಬಾಹ್ಯ ಲಕ್ಷಣಗಳನ್ನು ಗಮನಿಸಿ ರೂಪಿಸಿಕೊಂಡಂತಿರುವ ಈ ಸಿದ್ಧಾಂತ 'ನ್ಯಾಯ' ಮತ್ತು 'ಸಮಾನತೆ' ನಡುವೆ ವ್ಯತ್ಯಾಸಗಳನ್ನು ಅಸಮಂಜಸವಾದ ಮತ್ತು ಕೃತಕ ರೀತಿಯಲ್ಲಿ ಗುರುತಿಸುವುದರೊಂದಿಗೆ ಆರಂಭವಾಗುತ್ತದೆ. ಬಹುಶಃ

54., 55. ಮತ್ತು 56. ಇತಿಹಾಸ ಚಕ್ರ, ಪುಟ 52, 61 ಮತ್ತು 52.

ಇದರಿಂದಾಗಿಯೇ ಜಾಗತಿಕ ಇತಿಹಾಸವನ್ನು ಅರ್ಥಮಾಡಿಕೊಳ್ಳುವುದರಲ್ಲಿ ಮಾತ್ರವಲ್ಲ ನಮಗೆ ಈಗ ಹೆಚ್ಚು ಅಗತ್ಯವಾಗಿರುವ ಭಾರತೀಯ ಸಮಾಜವನ್ನು ಅರ್ಥೈಸುವ ಬಗ್ಗೆಯೂ ಲೋಹಿಯಾವಾದ ಅರ್ಥಪೂರ್ಣವಾದದ್ದೇನನ್ನೂ ಹೇಳಲು ಶಕ್ತವಾಗಿಲ್ಲ.

## ಅನುಬಂಧಗಳು

೧. ಭಾರತದಲ್ಲಿ ಅಭಿವೃದ್ಧಿಯನ್ನು ಸೂಚಿಸುವ ಅಂಕಿ-ಅಂಶಹೀಗಿವೆ : ಸರಾಸರಿ ಪ್ರತಿವ್ಯಕ್ತಿಯ ವಾರ್ಷಿಕ ವರಮಾನ ಇಪ್ಪತ್ತು ವರ್ಷಗಳಲ್ಲಿ ಸುಮಾರು ಶೇ. 8 ರಷ್ಟು ಹೆಚ್ಚಾಯಿತು.

ಕೃಷಿ ಉತ್ಪಾದನೆ ಪ್ರತಿವರ್ಷ ಶೇ. 3.5 ರ ದರದಲ್ಲಿ ಹೆಚ್ಚುತ್ತಾ ಬಂತು.

ಕೈಗಾರಿಕೆಗಳ ಉತ್ಪಾದನೆ ಪ್ರತಿವರ್ಷ ಶೇ. 4.5 ರ ದರದಲ್ಲಿ ಹೆಚ್ಚುತ್ತಾ ಬಂತು.

ಈ ಮಧ್ಯೆ ಬಂಪರ್ ಕೃಷಿ ಉತ್ಪಾದನೆಯ 'ಹಸಿರು ಕ್ರಾಂತಿ'ಯೂ ಆಯಿತು.

ಸಮಾನತೆಯ 'ಬೆಳವಣಿಗೆ'ಯ ಸೂಚಿ ಹೀಗಿದೆ.

ಕೇವಲ 25 ದೊಡ್ಡ ವ್ಯಾಪಾರೀ ಮನೆತನಗಳ ಸಂಪತ್ತು ಶೇ. 60ರಷ್ಟು ಹೆಚ್ಚಾಯಿತು

ಕಾರ್ಖಾನೆ ಕಾರ್ಮಿಕರ ನಿಜವರಮಾನ ಶೇ. 5 ರಷು ಕಡಿಮೆಯಾಯಿತು.

ಕೃಷಿ ಕೂಲಿಕಾರರ ನಿಜವರಮಾನ 1961–71 ರಲ್ಲಿ ಗಂಡಸರಿಗೆ ಶೇ, 33.33 ರಷ್ಟು ಹೆಂಗಸರಿಗೆ ಶೇ. 50 ರಷ್ಟು ಕಡಿಮೆಯಾಯಿತು.

ಇದೇ ಸಮಯದಲ್ಲಿ ಕೃಷಿಕೂಲಿಕಾರರ ಸಂಖ್ಯೆ ಶೇ. 15ದಿಂದ ಶೇ. 24.9ಕ್ಕೇರಿತು. ಅಂದರೆ ಸುಮಾರು ಶೇ. 10ರಷ್ಟು ಬಡರೈತರು ಎಲ್ಲವನ್ನೂ ಕಳೆದುಕೊಂಡು ಕೃಷಿ ಕೂಲಿಕಾರರಾದರು.

ಮತ್ತು ಇದೇ ಅವಧಿಯಲ್ಲಿ 'ಹಸಿರು ಕ್ರಾಂತಿ' ಯಾಯಿತು. ಕೃಷಿ ಉತ್ಪನ್ನಗಳ ಬೆಲೆಯಲ್ಲಿ ಕೈಗಾರಿಕಾ ಉತ್ಪನ್ನಗಳ ಬೆಲೆಗಿಂತ ಶೇ. 1.5 ರಷ್ಟು ಹೆಚ್ಚಿನ ಅಭಿವೃದ್ಧಿ ಯಾಯಿತು. [ಆಧಾರ : ರಾಷ್ಟ್ರೀಯ ಕಾರ್ಮಿಕ ಆಯೋಗ, ಕೃಷಿ ಕಾರ್ಮಿಕ ವಿಚಾರಣೆ 1963–64, ಗ್ರಾಮಾಂತರ ಕಾರ್ಮಿಕ ವಿಚಾರಣೆ 1974-75 ಇತ್ಯಾದಿ ಸರಕಾರಿ ವರದಿಗಳು]

೨. ವರ್ಗ ಹೋರಾಟದ ಕಮ್ಯುನಿಸ್ಟ್ ತತ್ವದಿಂದ ಪ್ರೇರಿತವಾಗಿ ಯಾವುದೇ ಸಮಾಜದಲ್ಲಿ ಬದಲಾವಣೆಯಾಗಿದ್ದರೆ ಅದು ಜಾತಿಯ ಕಡೆಗೆ ತುಯ್ಯುವ ಕ್ರಿಯೆ–ಇದು ಲೋಹಿಯಾ-ವಾದದ ಒಂದು ಸೂತ್ರವೆನ್ನಬಹುದು. ಶ್ರೀ ಡಿ.ಎಸ್. ನಾಗಭೂಷಣ

ರವರು ಈ ಸೂತ್ರವನ್ನು ಚೀಣಾಕ್ಕೆ ಅನ್ವಯಿಸುತ್ತಾ (ಸಮನ್ವಯ ; ಸಂಪುಟ 1, ಸಂಚಿಕೆ 7( "ಚೀಣಾ ಮಾವೋ ಸಾವಿಗೆ ಕಾಯುತ್ತಾ ಕೂತಿತ್ತೇನೋ ಎಂಬಂತೆ ಈ ನವ ಜಾತಿ ನಿರ್ಮಾಣದ ವಿರುದ್ಧ ಬಂಡೆದ್ದಿದೆ" ಎನ್ನುತ್ತಾರೆ. "ಬೆಕ್ಕು ಕಪ್ಪಗಿರಲಿ, ಕೆಂಪಗೇ ಇರಲಿ ; ಅದು ಇಲಿ ಹಿಡಿದರೆ ಸಾಕು" "ಎಂಬುದು ಜಾತಿ ವಿರೋಧೀ ನಿಲುವು ಎಂದು ಅವರ ಭಾವನೆ. ಅದು ಹೇಗೋ ಗೊತ್ತಿಲ್ಲ. ಚೀಣಾದ ಸಂದರ್ಭದಲ್ಲಿ ಈ ಮಾತಿನ ಅರ್ಥ, ಸೈದ್ಧಾಂತಿಕ ಭಾವನೆಗಳಿಗಿಂತ ಉದ್ದೇಶ ಸಾಧನೆ ಮುಖ್ಯ ಎಂಬುದು. ಇದಕ್ಕೂ ಸಮಾನತೆಯ ಹೋರಾಟಕ್ಕೂ ಏನು ಸಂಬಂಧ ? [ಈ ರೀತಿ ನೋಡಿದರೆ ಗಾಂಧೀಜಿ ಇದನ್ನು (ಗುರಿ ಮತ್ತು ಸಾಧನೆ) ಒಪ್ಪುವುದಿಲ್ಲವಾದ್ದರಿಂದ ಅವರೂ ಜಾತಿಪರ ವ್ಯಕ್ತಿಯಾಗುತ್ತಾರೆ. ಆದರೆ ಲೋಹಿಯಾರ ಪ್ರಕಾರ ಅವರು ಜಾತಿವಿರೋಧಿ.] ನಿಜವಾಗಿ ಚೀಣಾದ ನಾಯಕರು ತಮ್ಮ ದೇಶದ ಮೂರು ದಶಕಗಳ ಕಾಲದ ಸ್ವಾವಲಂಬೀ ವಿಕೇಂದ್ರೀಕೃತ ತಾಂತ್ರಿಕತೆಯಿಂದ ವೇಗದ ಅಭಿವೃದ್ಧಿ, ಆಧುನೀಕರಣ ಸಾಧ್ಯವಿಲ್ಲವೆಂದು ಪಶ್ಚಿಮದ ಉತ್ಪಾದನಾಪರ ತಾಂತ್ರಿಕತೆಯನ್ನು ಆಹ್ವಾನಿಸುವುದನ್ನು ಸಮರ್ಥಿಸಿಕೊಳ್ಳಲು ಹೀಗೆ ಹೇಳುತ್ತಾರೆ. ಲೋಹಿಯಾರ ಮಾತುಗಳಲ್ಲಿ ಹೇಳುವುದಾದರೆ ಪಶ್ಚಿಮದ ತಾಂತ್ರಿಕತೆ ಏಕಮುಖ ಕಾರ್ಯದಕ್ಷತೆಯನ್ನಲ್ಲದೆ ಬೇರೇನನ್ನೂ ಸಾಧಿಸಿಲ್ಲ. ಆದ್ದರಿಂದ ಚೀಣಾದ ಈಗಿನ ನಾಯಕರ ವರ್ತನೆ ನಾಗಭೂಷಣರವರು ಭಾವಿಸಿರುವಂತೆ 'ಮೂರನೇ ಜಗತ್ತಿನಲ್ಲಿ ಹೊಸ ಆಶಯ'ವನ್ನೇನೂ ಮೂಡಿಸಿಲ್ಲ. ಚೀಣಾದ ಈಗಿನ ಸ್ಲೋಗನ್ 'ಸಮಾನತೆ' ಅಲ್ಲ. 'ನಾಲ್ಕು ಆಧುನೀಕರಣಗಳು' ಈಗ ಅವರ ಘೋಷವಾಕ್ಯ. ರಷ್ಯಾದ ಮಾಜೀ ಪ್ರಧಾನಿ ಕ್ರುಶ್ಚೇವ್ ತನ್ನ ದೇಶದ ಯುವಕರು ಕೈಮಣ್ಣಾಗಿಸುವ ಕೆಲಸಗಳಿಂದ ವಿಮುಖರಾಗಿ ಒರೆಯುವ ಕೆಲಸವನ್ನೇ ಹೆಚ್ಚಾಗಿ ಬಯಸುತ್ತಾರೆ ಎಂದು ಬೇಸರದಿಂದ ಹೇಳಿದ ಮಾತಿನಲ್ಲಿ ಲೋಹಿಯಾರವರಿಗೆ ಭಾರತದ ಜಾತಿಪದ್ಧತಿಗೆ ಒಂದು ಕಾರಣ ಕಂಡಿತ್ತು. ಅಲ್ಲದೆ ಲೋಹಿಯಾರಿಗೆ ಕಾಣುವ 'ಜಾತಿಪದ್ಧತಿ'ಗೆ ವ್ಯವಸಾಯ ಪ್ರಧಾನ ದೇಶದಲ್ಲಿ ಉಚ್ಚ ಮಟ್ಟದ ಕೈಗಾರಿಕೆಯ ಅರ್ಥವ್ಯವಸ್ಥೆಯನ್ನು ಸೃಷ್ಟಿಸುವ ಅಗತ್ಯ ಕಾರಣವಾಗಿರಬಹುದೆಂದೂ ಅವರು ಭಾವಿಸುತ್ತಾರೆ. ಇವೆರಡನ್ನು ನಿಜವೆಂದಿಟ್ಟುಕೊಂಡರೆ ಮಾವೋರ ಚೀಣಾ 'ಜಾತಿಯ ಕಡೆಗೆ ತುಯ್ಯುವಿಕೆ'ಯನ್ನು ತಡೆಯಲು ಪ್ರಯತ್ನಿಸಿತೆಂದೇ ಹೇಳಬೇಕಾಗುತ್ತದೆ. ಲೋಹಿಯಾರಿಗೆ ಪ್ರಿಯವಾಗಿದ್ದ ಸಣ್ಣ ಪ್ರಮಾಣದ ಯಂತ್ರಗಳನ್ನಾಧರಿಸಿದ ವಿಕೇಂದ್ರೀಕೃತ ತಂತ್ರಜ್ಞಾನ, ಹಳ್ಳಿ-ಪಟ್ಟಣಗಳ ನಡುವೆ ಅಂತರವನ್ನು ಕುಗ್ಗಿಸುವುದು, ಉಚ್ಚ ಶಿಕ್ಷಣದಲ್ಲಿ ಹಳ್ಳಿಯ ರೈತ ಕುಟುಂಬಗಳಿಗೆ 'ಮೀಸಲಾತಿ', academic excellence ಅಥವಾ ಒಣಪಾಂಡಿತ್ಯವೇ ಉಚ್ಚ ಶಿಕ್ಷಣದ ಏಕಮಾತ್ರ ಉದ್ದೇಶವಾಗದಂತೆ ಪ್ರಯತ್ನಿಸಿದ್ದು, ಹಳೆಯ ಸಮಾಜದ ಮೌಲ್ಯಗಳನ್ನು ಮತ್ತು ಪಕ್ಷದ ಕೆಲವು ಹಿರಿಯ ನಾಯಕರ ವರ್ತನೆಗಳನ್ನು ಟೀಕೆಗೆ ಒಳಪಡಿಸಿದ್ದು ಮುಂತಾದವುಗಳನ್ನು ಲೋಹಿಯಾ ಸಿದ್ಧಾಂತದ ಪ್ರಕಾರವೂ ಜಾತಿನಿರ್ಮಾಣದ ಪ್ರಯತ್ನ ಎನ್ನುವುದ

ಕ್ಕಿಂತ ಅದನ್ನು ವಿರೋಧಿಸುವ ಪ್ರಯತ್ನ ಎನ್ನಬಹುದು. ಆದ್ದರಿಂದ ಈ ಧೋರಣೆಯನ್ನು ಸಡಿಲಿಸಿದ ಅಥವಾ ಬದಲಿಸಿದ ಈಗಿನ ಚೀಣಾದ ನಾಯಕತ್ವ ನವ ಜಾತಿ ನಿರ್ಮಾಣದ ವಿರುದ್ಧ ಬಂಡೆದ್ದಿದೆ ಎಂಬುದು ವಿರೋದಾಭಾಸವಾಗುತ್ತದೆ. ನಿಜವಾಗಿ ಲೋಹಿಯಾವಾದ ಮಾವೋ ಮತ್ತು ಆತನ ನಂತರದ ಚೀಣಾದ ಸಾಧನೆ, ಸೋಲು, ಸಮಸ್ಯೆಗಳನ್ನು ತಿಳಿಯಲು ಏನೂ ಸಹಾಯಮಾಡುವುದಿಲ್ಲ (ಲೋಹಿಯಾರ ರಷ್ಯಾ ಮತ್ತು ಜರ್ಮನಿಯ ಉದಾಹರಣೆಗಳಂತೆ) ಎಂಬುದನ್ನು ನಾಗಭೂಷಣರ ಈ ಪ್ರಯತ್ನ ತೋರಿಸುತ್ತದೆ.

೩. ಬೌದ್ಧ ಗ್ರಂಥಗಳಲ್ಲಿ ಕಂಡುಬರುವ ನಿಯಮಗಳ ಪ್ರಕಾರ ಬೌದ್ಧ ಸಂಘಗಳಲ್ಲಿನ ಪ್ರತಿಯೊಂದು ವಸ್ತುವೂ ಸಂಘಕ್ಕೆ ಸೇರಿದ್ದು ; ಅದು ಭಿಕ್ಷುಗಳ ಸೊತ್ತಲ್ಲ. ತನ್ನ ಸ್ವಂತ ಉಪಯೋಗಕ್ಕೆಂದು ಪಡೆದ ವಸ್ತುಗಳನ್ನಷ್ಟೇ ಭಿಕ್ಷು ಹೊಂದಿರಬಹುದು. ಭಿಕ್ಷುವಿನ ಮರಣದ ನಂತರ ಅವೂ ಸಂಘಕ್ಕೆ ಸೇರುತ್ತಿದ್ದವು.

ಒಂದು ಬೌದ್ಧ ಸೂತ್ರ ಹೀಗೆ ಹೇಳುತ್ತದೆ :

"ನಾನು ಈ ಜಗತ್ತಿನಲ್ಲಿ ಸಂಪತ್ತನ್ನು ಕಾಣುತ್ತಿದ್ದೇನೆ. ತಾವು ಪಡೆದುಕೊಂಡ ವಸ್ತುಗಳಲ್ಲಿ ಬೇರೆಯವರಿಗೆ ಸ್ವಲ್ಪಾಂಶವನ್ನು ಕೊಡದಿರುವ ತಪ್ಪನ್ನು ಜನ ಮಾಡುತ್ತಿದ್ದಾರೆ. ಸಂಪತ್ತನ್ನು ರಾಶಿಹಾಕುತ್ತಾ ಮತ್ತಷ್ಟು ಇನ್ನಷ್ಟು ಭೋಗದ ಕಡೆಗೆ ಹೋಗುತ್ತಿದ್ದಾರೆ."

ಇನ್ನೊಂದು ಸೂತ್ರ ಹೀಗೆನ್ನುತ್ತದೆ:

"ರಾಜ್ಯಗಳನ್ನಾಳುವ ಶ್ರೀಮಂತ ರಾಜಕುಮಾರರು ಒಬ್ಬರು ಇನ್ನೊಬ್ಬರ ಸಂಪತ್ತಿನ ಮೇಲೆ ದುರಾಸೆ ಪಡುತ್ತಿದ್ದಾರೆ. ಇವರು ಹೀಗೆ ಅತೀವ ಚಂಚಲತೆಯಿಂದ ಅಶಾಶ್ವತ ಪ್ರವಾಹದಲ್ಲಿ ಈಜುತ್ತಿದ್ದರೆ, ದುರಾಸೆಗೆ, ಅತಿ ಆಸೆಗೆ ಬಲಿಯಾಗುತ್ತಿದ್ದರೆ ಯಾರು ತಾನೇ ಈ ಭೂಮಿಯಲ್ಲಿ ಶಾಂತಿಯಿಂದಿರಲು ಸಾಧ್ಯ ?"

ಬುದ್ಧನ ಚಳವಳಿ ಬಗ್ಗೆ ಪ್ರೊ. ದೇವೀಪ್ರಸಾದ್ ಚಟ್ಟೋಪಾಧ್ಯಾಯ ಈ ರೀತಿ ಅಭಿಪ್ರಾಯ ಪಡುತ್ತಾರೆ.

ಬುದ್ಧ ಜೀವಿಸಿದ್ದು ಪ್ರಾಚೀನ ವರ್ಗವಿಹೀನ ಬುಡಕಟ್ಟು ಸಮಾಜಗಳು ವರ್ಗ ಸಮಾಜಗಳಾಗಿ ಪರಿವರ್ತನೆಯಾಗುತ್ತಿದ್ದ ಕಾಲದಲ್ಲಿ. ವರ್ಗ ಸಮಾಜದಲ್ಲಿ ಕಂಡು ಬಂದ ದುರಾಸೆ, ಭೋಗ, ಮೋಸ, ಸ್ವಾರ್ಥ ಇತ್ಯಾದಿಗಳನ್ನು ಕಂಡ ಬುದ್ಧನಿಗೆ ಇವುಗಳಿಂದ ತಪ್ಪಿಸಿಕೊಳ್ಳಲು ಕಂಡುಬಂದ ಒಂದೇ ದಾರಿಯೆಂದರೆ ಆದೇ ತಾನೇ ಮುಗಿದುಹೋದ ಆದಿಮ್ಯವಸ್ಥೆಯ ಸಾಮ್ಯಸ್ಥಿತಿಯನ್ನು ಮತ್ತೆ ಸ್ಥಾಪಿಸುವುದು. ಆದರೆ ಚರಿತ್ರೆಯ ನಿಯಮ

ಗಳನ್ನು ಬದಲಿಸುವುದು ಬುದ್ಧನಿಗೂ ಆಗಲಿಲ್ಲ. ಆತನಿಗೆ ಮಾಡಲು ಸಾಧ್ಯವಾದದ್ದೆಂದರೆ ಆಧ್ಯಾವಸ್ಥೆಯ ಸಾಮ್ಯಸ್ಥಿತಿಯ ಅಂದರೆ ಬುಡಕಟ್ಟು ಸಮಾಜಗಳಲ್ಲಿದ್ದ ಸ್ವಾತಂತ್ರ್ಯ, ಸಮಾನತೆ ಮತ್ತು ಬಂಧುತ್ವದ ಭ್ರಮೆಯನ್ನು ವರ್ಗಸಮಾಜದಲ್ಲಿ ಸೃಷ್ಟಿಸುವುದು. ನಿಜವಾಗಿ ಬೌದ್ಧ ಸಂಘಗಳು ವರ್ಗಸಮಾಜದ ಚೌಕಟ್ಟಿನೊಳಗೇ ಇದ್ದ ವರ್ಗರಹಿತ ಸಂಘಟನೆಗಳು...........ಇದು ಬೌದ್ಧ ಚಳವಳಿ ಆರಂಭದಲ್ಲಿ ಯಶಸ್ವಿಯಾದದ್ದನ್ನು, ನಂತರದ ಅದರ ಸೋಲುಗಳನ್ನು ವಿವರಿಸುತ್ತವೆ. ಬುದ್ಧನ ಪರಿಹಾರ ಭ್ರಮಾತ್ಮಕವಾದ್ದರಿಂದ ದೇವರ ಅಸ್ತಿತ್ವವನ್ನೇ ನಿರಾಕರಿಸಿದ್ದರೂ ಬೌದ್ಧ ಚಳವಳಿ ಕ್ರಮೇಣ ಅಸ್ಥಾನ ಧರ್ಮ (state religion) ವಾಗಿ ಪರಿವರ್ತಿತವಾಯ್ತು.

[Buddhism : The Marxist Approach ನಲ್ಲಿ ಪ್ರೊ. ಚಟ್ಟೋಪಾಧ್ಯಾಯರ ಲೇಖನ, Some problems of early Buddhism ನಿಂದ]



ಬಂಡವಾಳ ಮಾದರಿಯ ಉತ್ಪಾದನೆಯೊಂದಿಗೆ ಬಹು ಮಧುರವಾಗಿ ಹೊಂದಿಕೊಳ್ಳುವ ಕೂಲಿಪದ್ಧತಿ,- 'ಬಿಡಿಕೂಲಿ' ಪದ್ಧತಿ..........ಇದು ಕೆಲಸದ ದಿನವನ್ನು ಲಂಬಿಸಲು ಮತ್ತು ಕೂಲಿಯನ್ನು ತಗ್ಗಿಸಲು ಒಂದು ಸುಲಭ ಯಂತ್ರವಾಗಿ ಕೆಲಸ ಮಾಡಿದೆ.

—ಕಾರ್ಲ್ ಮಾರ್ಕ್ಸ್

ಬಿಡಿ-ಕೂಲಿ ಪದ್ಧತಿ, ಜಡತೆಯನ್ನು ಕಳೆದು ಕಾರ್ಮಿಕನನ್ನು ಜಾಗೃತನಾಗಿಸುವ ಒಂದು ಕ್ರಾಂತಿಕಾರಿ ಪದ್ಧತಿ-ಬಂಡವಾಳ ಮಾದರಿಯ ಉತ್ಪಾದನೆಯಲ್ಲಿ ಕಾರ್ಮಿಕರು ಸೋಮಾರಿಗಳಾಗಿ ಕಾಲಹರಣ ಮಾಡುತ್ತಾರೆ. ಆದರೆ ಈಗ ಪ್ರತಿಯೊಬ್ಬರಿಗೂ ಕಷ್ಟಪಟ್ಟು ದುಡಿಯಲು ಮತ್ತು ಹೆಚ್ಚು ಹಣಗಳಿಸಲೂ ಅವಕಾಶವಿದೆ.

—ಸ್ಕ್ಯಾನ್‌ಟೆಯಾ (ರುಮಾನಿಯನ್ ಕಮ್ಯುನಿಸ್ಟ್ ಪತ್ರಿಕೆ)

# ಎರಡು ಸಾನೆಟ್ಟುಗಳು

೧

ಅತೃಪ್ತಿ ಬೇಸರದ ಬೇಸಗೆಯ ಕಪ್ಪಿರುಳು.
ಹುದುಗಿ ಇಹವೊ ಇಲ್ಲವೊ ಎಂಬ ಮಾಡು ಗೂಡು.
ಬಡತನದ ಹಾಸಿನಲಿ ಅಮರಿಕೊಂಡಿರುವ ಸೆಕೆ,
ಹೊದಿಕೆ ಹೊದ್ದರೆ ಪ್ರಾಣ ಹೋಗುತ್ತದೆ. ಹೊದೆಯದಿರೆ
ಸೊಳ್ಳೆ ಜೀಗುಟ್ಟಿ ಜೀಯ್‌ಗುಟ್ಟಿ ಜೀವ ಅಗಿಯುತ್ತವೆ.
ನಿದ್ದೆ ಮುದ್ದುಮೊಗ ದೂರದಲ್ಲಷ್ಟೆ ಕಂಡಡಗುವಳು.
ಇರವಿಗೂ ಕನಸಿಗೂ ಸ್ನೇಹ ಮೋಹಗಳಿರದೆ
ಮೈ ಮರವಿನೊಡನೆ ಸಂಬಂಧವುಂಟಾಗದಿದೆ.
ಹೊರ ಹೊರಳಿ ನರಳುವಿಕೆ ಕೆರಳಿ ಸೊಳ್ಳೆಯ ಸೋವಿ
ಅರಳುವಿಕೆಗೂ ನನಗು ಸಂಬಂಧವೇರ್ಪಡದೆ
ನನಗು ನಿನಗೂ ಹಿಮಾಲಯ ದೂರ, ಭೂಭಾರ
ಇಲ್ಲಿ ಬದುಕಲಾಗದು, ಸಾವು ಎನಲು ಹೇಗದು ?
ಬಿಲ್ಲ ಹಿಡಿಯದೆ ಲೋಕ ಇನ್ನು ಬದಲಾಗದು
ಬದಲುಗೊಳಿಸದೆ ಸೊಳ್ಳೆ ರಕ್ತ ಕುಡಿವುದಬಿಡದು.

೨

ಮಳೆಗಾಳಿ ಚಳಿ ಬಿಸಿಲಿಗೆ ಕಷ್ಟಪಟ್ಟು ಗೆದ್ದಲು
ಹುತ್ತ ಗಟ್ಟುವುವು. ಹುತ್ತ ಸಿದ್ಧವಾಗಲು ಗೆದ್ದಲ
ನುಂಗಿ ಹಾವು ಸೇರುವುವು. ದೊಡ್ಡದು ಚಿಕ್ಕದಕೆ
ಕಂಟಕವು. ಹಾವುಗಳಿಗೆ ಬಾಯಲ್ಲಿ ವಿಷ,
ಸೊಟ್ಟ ಕೋವೆಯಲ್ಲೂ ಸರಿವ ಗುಣ, ಹಗಲು
ರಾತ್ರಿಯ ಭೇದವಿಲ್ಲ. ಇಲಿ ಕಪ್ಪೆ ತಿಂದು ಹೆಡೆ ಬಿಡಿ

ಹೆಗರಿಸುವ ಉದ್ಯೋಗ. ಧೂಳು ಪೆರವಣಿಗೆಯಲಿ
ಬುಸುಗುಡುವ ಮೂರ್ತಿ. ಒಮ್ಮೊಮ್ಮೆ ಮನೆಗೂ ನುಗ್ಗಿ
ಕಾಣ್ಯ ಹಾವಳಿ ಹತ್ಯೆ ; ಕೊನೆಯಿರದ ಮಿಥ್ಯೆ.
ಹಕ್ಕಿ ಹುತ್ತದ ಮೇಲೆ ಪ್ರಾತಃಕಾಲ ಲೋಕದ ಮೇಲೆ
ಹೊಸಬರೋ ಎಳೆಗಿರಣ ಅರುಣ ಮರಗಿಡ ಬಯಲು.
ಈ ಇಂಥ ಹೊತ್ತಲ್ಲು ಹಾವು ಹಿಡಿಯಿತು ಹಕ್ಕಿ
ಕಾಲುಗಳ. ಭಯಗ್ರಸ್ತ ಹಕ್ಕಿ ಚೀರಿತು ನಡುಗಿ
ಮುರಿದು ಬಿದ್ದಿತು ಹಾವ ಮೇಲೆ ಕಟ್ಟಿಗೆ ಎರಗಿ
ಹಿಂಸೆ ತಪ್ಪಿದ ಒಡನೆ ಹಾರಿ ಖಗ ನಗೆ ನಾಡು.

—ವೀಚಿ

# ಬೆಳುವಲದ ಬಾಗಿನ

ಬಯಲುಸೀಮೆಯ ಬಿರುಬಿಸಿಲಿಗೆರೆ ಹೊಲದೆದೆಯ

ಎರಕಲು ಬೀಡು ಕಾದು ಕಂಗೆಡಿಸಿರಲು, ಮುಗಿಲು—
ಮುಂಗಾರು ಹದಗೊಳಿಸಿ ಮುಂದಿನ ತಲೆಗೆ ಮಿಗಿಲು

ಹಾರೈಸಿ ; ಹಿಂಗಾರು : ಜೋಳ ಗೋಧಿಯ ತೆನೆಯ
ಸಿಂಗಾರ. ಕಡಲೆ ಮಿಡಿಗೆ ಕೊಡರ್‌ಕೊಂಚೆ ಹಿಂಡು.

ಕುಸುಬೆ ಸಾಲಿನ ಹೂವಿನಂಚೆಲ್ಲ ಜರತಾರಿ.
ಬಿಸಿಲು ಕಾಸಿದ ಬೆಳ್ಳಿ : ಹತ್ತಿ–ತೊಳೆ ರೂವಾರಿ.

ಮಾವು, ಹುಣಿಸೆಯು, ಬೇವು ಗುಡಿಹುಣ್ಣಿಮೆಗೆ ಈಡು.
'ಬೆಳುವಲದ ಮುನ್ನೂರು' : ನೆಲ-ನೀರು-ಗಾಳಿಯಲಿ

ಹಲವು ಹಂಬಲ ತುಂಬಿ ಬಿಂಬ ಪ್ರತಿಬಿಂಬದಲಿ
ಒಲವಿನೊಂದೇ ರೂಪ ; ಆರೋಗಣೆಯಂಬಲಿ.

ಬಯಲ ದೀಪ ಸ್ತೂಪ ಹೇಗೊ ಹಿಡಿದಿದೆ ಜೋಲಿ.

ದುಡಿಮೆಯೊಳಗೊಂದು ಸುಖ, ನೋವು–ನಲವಿನ ಜೀಕ.
ಪಡೆದ ಭಾಗ್ಯವು ಬೇರೆ : ಸಂಸ್ಕೃತಿ ಭೂಮಿ ತೂಕ.

—ಚೆನ್ನವೀರ ಕಣವಿ

# ಬಾಯಿಬಿಟ್ಟರೆ ಜೋಕೆ !

'ಬೀದಿ ದೀಪಕ್ಕೆ ಕಲ್ಲು ಹೊಡೀತಿದ್ದಾನೆ'
'ಕೊತ್ವಾಲನ ನೀನು ?'
'ಜೇಬಿಗೆ ಕೈ ಹಾಕುತ್ತಿದ್ದಾನೆ'
'ನಿನಗೂ ಬೇಕೇನೊ ಪೇರು ?'
'ಜನರನ್ನು ಚಿತಾವಣೆ ಮಾಡುತ್ತಿದ್ದಾನೆ.'
'ಧರ್ಮರಾಯನ ತುಂಡು ಇವನು !'
'ಎಣ್ಣೀಗೇನೊ ಬೆರಸುತ್ತಿದ್ದಾನಲ್ಲ !'
'ಅಯ್ಯ, ಶ್ರೀರಾಮಚಂದ್ರ, ನಿನ್ನದು ನೋಡಿಕೊ ನೀನು.'
ಹುಡುಗಿಯ ಮೇಲತ್ಯಾಚಾರವೆ ?'
'ಅವರವರ ಮಿತಿಗೊತ್ತಿದ್ದರೆ ಮೇಲು.'
'ಮಾಡಬಾರದ್ದನೆಲ್ಲ ಮಾಡುತಿದ್ದಾರಲ್ಲ !'
'ಏನೊ ಕಿಸೀತಿ ನೀನು ?'
'ಹಾಗೆನ್ನುತ್ತೀರಾ ನೀವು ?'
'ಮುಚ್ಚಿಕೊಳ್ಳಯ್ಯ ಸುಮ್ಮನೆ'
'ಗೂಂಡಾಗಿರಿ ಇದೊಳ್ಳೆದಲ್ಲಾರೀ' – ಅಂದರೆ
ಕಿವಿಗಿಳಿಯುವುದೇನು ?
ಸುತ್ತಲು ಇವರೇ
ದೊಣ್ಣೆ ಚಾಕು ಸೈಕಲು ಚೈನು
ಗಿರಗಿರ ಸುತ್ತುತ್ತಿವೆ ಸುತ್ತ
ಬಾಯಿಬಿಟ್ಟೀರಿ ಜೋಕೆ
ಎಂದಬ್ಬರಿಸುತ್ತಿವೆ.

—ಜಿ. ಎಸ್. ಸಿದ್ಧಲಿಂಗಯ್ಯ

# ಎರಡು ಪದ್ಯಗಳು

## ವಿಧಿ

ಜಗತ್ತಿನ ಮನುಷ್ಯ ದುಷ್ಟ ವ್ಯಾಘ್ರಗಳನ್ನ
ಬದುಕ ನಕಲಿ ಆವೃತ್ತದ ಒಳಗೇ ಕೂಡಿ
ಆಸೆ ಆಮಿಷಗಳ ಕೈಯನ್ನು ಬೆನ್ನಮೇಲಾಡಿಸುತ್ತ
ಬೆದರಿಕೆ, ಬಡತನಗಳ ಮುಳ್ಳು ಚಾವಡಿಯಲ್ಲಿ
ಆಗಾಗ ಚುರುಕು ಮುಟ್ಟಿಸಿ
ಬದುಕ ಹದ ಮಾಡುವ
ರಿಂಗ್
ಮಾಸ್ಟರ್

## ಆಸೆಗಳು

ಎದೆಯ ತಂಪು ನೆಲದಲ್ಲಿ
ಬಯಕೆಯ ಮಳೆಯಾದಾಗ
ಹುಟ್ಟಿ
ನಿರಾಸೆಯ ಬಂಜರಲ್ಲಿ ಸತ್ತು
ಪುನಃ ಮಳೆ ಕಂಡಾಗ
ಎಲ್ಲೆಲ್ಲೂ ತಲೆಯೆತ್ತಿ ಕಾಣುವ
ನೂರಾರು
ನಾಯಿಕೊಡೆಗಳು.

—ಕೆ. ಎನ್. ಶಶಿಪ್ರಭಾ

# ಮಂಚಿಕೇರಿಯಲ್ಲಿ ಎರಡು ದಿನಗಳು

ಪುರುಷೋತ್ತಮ

ಉತ್ತರ ಕನ್ನಡ ಜಿಲ್ಲೆಯ ಮಂಚಿಕೇರಿಯ ಕೊರೆವ ಡಿಸೆಂಬರ್ ಚಳಿರಾತ್ರಿ ಮತ್ತು ಹಿತವಾದ ಹಗಲಿನಲ್ಲಿ ಎರಡು ದಿನಗಳನ್ನು ಸಮಾಜವಾದದ ಅಧ್ಯಯನಮಾಡುತ್ತ ಕಳೆದದ್ದು ಸಂತಸದ ಅನುಭವ. ಡಿಸೆಂಬರ್ 20ರ ಬೆಳಿಗ್ಗೆ ಹನ್ನೊಂದು ಗಂಟೆಗೆ ರಾಜ್ಯದ ಹಲವಾರು ಮೂಲೆಗಳಿಂದ ಬಂದಿದ್ದ ಇಪ್ಪತ್ತೈದು ಸಮಾಜವಾದಿ ಯುವ ಮಿತ್ರರು ಚರಿತ್ರೆಯ ಏಟುಗಳಿಂದ ಮರೆತು ಹೋಗುತ್ತಿರುವ ಸಿದ್ಧಾಂತದ ಮರು ಚಿಂತನೆಗಾಗಿ ಇಲ್ಲಿ ಸೇರಿದ್ದೆವು. ಮಾಜಿ ಮುಖ್ಯಮಂತ್ರಿ ದೇವರಾಜಅರಸರು ನಮ್ಮ ಅಧ್ಯಯನ ಶಿಬಿರ ಉದ್ಘಾಟಿಸಿದರು. ಇತಿಹಾಸದ ಘಾತಗಳಿಂದ ಕ್ರಮೇಣ ಕುಸಿಯುತ್ತಿರುವ ನಮ್ಮ ಮಾಜಿ ಮುಖ್ಯಮಂತ್ರಿಯ ವ್ಯಕ್ತಿತ್ವ ತನ್ನ ಹಲವಾರು ಸಂದಿಗ್ಧಗಳನ್ನು ಮೀರಲಾಗದೆ, ಹೊಸ ವಿಚಾರಗಳನ್ನು ಹೇಳಲು ಪ್ರಯತ್ನಿಸಿದರೂ ತನ್ನ ಹಳೆಯ ನಡವಳಿಕೆಗಳಿಗೆ ಸಮಜಾಯಿಷಿ ನೀಡಲು ಯತ್ನಿಸುತ್ತಿದ್ದುದು ವಿಚಿತ್ರವಾಗಿತ್ತು. ತನ್ನನ್ನೇ ನಿಜವಾದ ಸಮಾಜವಾದಿ ಎಂದು ಕರೆದುಕೊಳ್ಳುವ ಈ ವ್ಯಕ್ತಿ ಸದಾ ಬಡವರ ಬಗ್ಗೆ ಮಾತನಾಡುವುದನ್ನು ರೂಢಿ ಮಾಡಿಕೊಂಡಿದ್ದಾರೆ. ಸಭೆ ಶುರುವಾದಾಗಲೇ ಮಂಚಿಕೇರಿಯ ಸ್ಥಳಿಕರು ಮಾಜಿ ಮುಖ್ಯಮಂತ್ರಿಗೆ ಬೇಡತಿ ಜಲವಿದ್ಯುತ್‌ಯೋಜನೆಯ ನಿಲುಗಡೆಗಾಗಿ ಮನವಿ ಸಲ್ಲಿಸಿದ್ದರು. ಅರಸರು ತಮ್ಮ ಇಡೀ ಮಾತಿನ ಅವಧಿಯನ್ನು ತಾನು ಕಾಂಗ್ರೆಸ್ ತ್ಯಜಿಸುವ ವರೆಗೂ ನಡೆದ ಕಾಂಗ್ರೆಸ್ ಇತಿಹಾಸವನ್ನು ವ್ಯಾಖ್ಯಾನ ಮಾಡುತ್ತ ಹಲವಾರು ವಿರೋಧಾಭಾಸಗಳ ಹೇಳಿಕೆ ನೀಡಿ ಬೇಡತಿ ಯೋಜನೆಯ ಬಗ್ಗೆ ಪ್ರಸ್ತಾಪವನ್ನು ಮಾಡದೇ ಮುಗಿಸಿ ತಮ್ಮ ಚಾಣಾಕ್ಷತನ ತೋರಿಸಿದರು. ಬೇಡತಿಯ ಪ್ರಶ್ನೆ ಇಲ್ಲಿಯ ಜನರ ಅನ್ನದ ಜೊತೆಗೆ, ಈ ಪ್ರದೇಶದ ನೈಸರ್ಗಿಕ ಆಸ್ತಿಯ ಜೊತೆಗೆ ಹೆಣೆದುಕೊಂಡಿದೆ. ಇಂದಿರಾ ಗಾಂಧಿ 1979ರ ತನಕ ಬಡವರ ಬಂಧು, 1980ರಲ್ಲಿ ಶ್ರೀಮಂತರ ಕೈಗೊಂಬೆ ಎಂದು ಹೇಳುವ ಈ ಅರಸರೇ ಇಲ್ಲಿಯ ಜನರ ಸಮಸ್ಯೆಯನ್ನು ಹುಟ್ಟು ಹಾಕಿ ನಿಲ್ಲಿಸಿದ್ದವರು. ಸ್ಥಳೀಯರೊಬ್ಬರು. ಹೇಳುತ್ತಿದ್ದರು : 1978ರ ಚುನಾವಣೆಯಲ್ಲಿ ಅರಸರು ಇಲ್ಲಿಗೆ ಹೆಲಿಕಾಪ್ಟರಿನಲ್ಲಿ ಬಂದಿದ್ದರು, ಈಗ ಅವರನ್ನು ನೋಡಿದರೆ, ಸಿಟ್ಟು ಬರುತ್ತದೆ. ಜೊತೆಗೇ ಕನಿಕರ ಸಹ ಆಗುತ್ತೆ. ಭೂಸುಧಾರಣೆ, ಇತ್ಯಾದಿ ಯಾವಕ್ರಮಗಳಿಂದಲೂ ಬಾಧಿಸಲ್ಪಡದ ತಮ್ಮ ಒಂದೆರಡು ಎಕರೆ ತೋಟಗಳನ್ನು ಅತಿಶಯವಾಗಿ ಪ್ರೀತಿಸುವ

ಮೇಲ್ಜಾತಿಯ ಮಧ್ಯಮವರ್ಗದ ಈ ಪ್ರದೇಶದ ಜನರು ಏನು ಬಯಸಬಹುದೆಂದು ಅರಸರಿಗೆ ಗೊತ್ತು. ಅವರು ಅದನ್ನೇ ಹೇಳಿ ಮುಂದೆ ಹೋಗುವ ಚತುರ ರಾಜಕಾರಣಿ.

ನಮ್ಮ ಇನ್ನೊಬ್ಬ ಜನಪ್ರಿಯ ಉಪನ್ಯಾಸಕರು ಖಾದ್ರಿಶಾಮಣ್ಣ. ಹಿತವಾದ ಮಾತುಗಾರಿಕೆಗೆ ಹೆಸರಾದವರು. ಗೆಳೆಯರೊಬ್ಬರು ಹೇಳುತ್ತಿದ್ದರು ಖಾದ್ರಿ ಯಾವ ವಿಚಾರದ ಬಗ್ಗೆ ಮಾತಾಡಿದರೂ ಅದಕ್ಕೆ ಗಾಂಧೀ ಲೋಹಿಯಾ ಜೋಡಿಸುತ್ತಾರೆ. ಕ್ರಿಯೆ ಮತ್ತು ಕ್ರಿಯಾ ಪದಕ್ಕಿಂತ ಚಿಂತನೆ ಮತ್ತು ಭಾವ ತೀವ್ರತೆ ಇವರ ತುಂಡು ತುಂಡು ವಾಕ್ಯಗಳಲ್ಲಿ ಹರಿಯುವುದು ಹೆಚ್ಚು ಇವರ ಅಧ್ಯಕ್ಷ ಭಾಷಣ ಆಪ್ಯಾಯಮಾನ ವಾಗಿತ್ತು (ಅ ನ ಕೃ ಕ್ಷಮಿಬೇಡಿ). ಹೀಗೆ ಸಮಾಜವಾದದ ಬಗ್ಗೆ ಮಾತಾಡುವುದು ಸಮಾಜವಾದವನ್ನು ಸರಳಗೊಳಿಸುತ್ತದೆ ಎಂದು ಗೆಳೆಯ ವಾಸು ಹೇಳುತ್ತಿದ್ದರು.

ಮೊದಲ ಸಭೆಯಲ್ಲಿ ಗೆ॥ ವಾಸುದೇವನ್ ಸಮಾಜವಾದದ ಇತಿಹಾಸದ ಬಗ್ಗೆ ಓದಿದ ಪ್ರಬಂಧ ಎಷ್ಟು ಅದ್ಭುತವಾಗಿತ್ತೆಂದರೆ, ಸೇರಿದ್ದ ನೂರಕ್ಕೂ ಹೆಚ್ಚು ಜನರಿಗೆ ಅದು ತಲುಪಲಿಲ್ಲ. ಇಂಗ್ಲಿಷ್ ಪರಿಭಾಷೆಗಳಿಗೆ ನಮ್ಮ ಕಮ್ಯುನಿಸ್ಟರು ಅಂಟಿಕೊಂಡರೆ ಅವರಿಂದ ಯಾವ ಅಪಾಯವೂ ಆಗುವುದಿಲ್ಲ. ಇವರು ಇಂಗ್ಲೀಷಿನಂತಹ ಸಂಸ್ಕೃತ ಭಾಷೆಯಲ್ಲಿ ಮಾಡುವ ಸಿರಿವಂತರ ಖಂಡನೆ ಯಾವ ಬಡವನನ್ನೂ ಸಿಟ್ಟಿಗೇಳಿಸುವುದಿಲ್ಲ ; ಇರಲಿ, ಇಷ್ಟರ ನಡುವೆಯೂ ಗೆ॥ ವಾಸುದೇವನ್ ಭಾರತದಲ್ಲಿ ಸಮಾಜವಾದದ ಬೆಳ ವಣಿಗೆಯ ಸಮಗ್ರ ಚಿತ್ರ ಕೊಡಲಿಲ್ಲ. ಈ ಶತಮಾನದ ಎರಡನೇ ದಶಕದಲ್ಲಿ, ದುರ್ಬಲ ಕಾರ್ಮಿಕ ಸಂಘಟನೆಯೊಂದು ವಿ.ವಿ. ಗಿರಿಯ ಕಾರಣ ಹೋಳಾದದ್ದನ್ನು 'ಪೇಜುಗಟ್ಟಲೆ ವಿವರಿಸಿದ ವಾಸು ಮೂರನೇ ದಶಕದಲ್ಲಿ ಕಾಂಗ್ರೆಸ್‌ನಲ್ಲಿ ಸಮಾಜವಾದೀ ಚಿಂತನೆ ಆರಂಭ ವಾದದ್ದನ್ನು, ಕಮ್ಯುನಿಸ್ಟರು ಒಳಪ್ರವೇಶ ತಂತ್ರದ ಮೂಲಕ ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯನ್ನು ಕೈವಶಪಡಿಸಿಕೊಳ್ಳಲು ವಿಫಲರಾದದ್ದನ್ನು ಹೇಳಲೇ ಇಲ್ಲ. ಭಾರತದ ಸಮಾಜವಾದೀ ಚಿಂತನೆಯ ಬೆಳವಣಿಗೆಯಲ್ಲಿ ಮುಖ್ಯ ಅಂಶಗಳಾದ ಜಾತಿ, ತಂತ್ರಜ್ಞಾನ ಜನತಂತ್ರ ಮುಂತಾದ ಅಂಶಗಳ ಬಗ್ಗೆ ಗುಲಬರ್ಗದ ಬಿ.ಆರ್. ಪಾಟೀಲರು ಗಮನ ಸೆಳೆಯ ಬೇಕಾಯಿತು.

ಎರಡನೆ ಸಭೆಯಲ್ಲಿ ಜಾತಿ ಮತ್ತು ವರ್ಗವಿನಾಶ ಮತ್ತು ಅದಕ್ಕೆ ಬೇಕಾದ ಸಂಘ ಟನೆಗಳ ಬಗ್ಗೆ ಜಯಪ್ಪ ಪ್ರಬಂಧ ಓದಿದರು. ನಾಟಕೀಯವಾದ, ವೈಯುಕ್ತಿಕ ಬದುಕಿ ನಿಂದ ಆಗಾಗ ನೀಡುತ್ತಿದ್ದ ಉದಾಹರಣೆಗಳಿಂದ ಮತ್ತು ಕ್ಲಿಷ್ಟವಿಚಾರಗಳನ್ನು ಅದರ ಗಹನತೆಯನ್ನು ಸರಳಗೊಳಿಸದೆ ತಿಳಿಯಾಗಿ ಹೇಳುತ್ತಿದ್ದ ಜಯಪ್ಪ, ವರ್ಗಚಕ್ರ, ಜಾತಿ ಚಕ್ರಗಳ ಅಸ್ತಿತ್ವ ಮತ್ತು ಭಾರತೀಯ ಸಮಾಜದ ಮುನ್ನಡೆಯಲ್ಲಿ ಅವುಗಳ ಪಾತ್ರವನ್ನು

ವಿವರಿಸಿದ್ದರು. ನಿರೀಕ್ಷಿಸಿದ್ದಂತೆ, ಹಿಂದುಳಿದ ಜಾತಿಗಳವರಿಗೆ ಹುದ್ದೆ ಮೀಸಲಾತಿಯ ಔಚಿತ್ಯದ ಬಹಳ ಪ್ರಶ್ನೆಗಳು ಬಂದವು.

ಮುಂದಿನ ಸಭೆಯಲ್ಲಿ ಗೆ॥ ರಮೇಶ ಬಂದರಗದ್ದೆ ರೈತ-ಕಾರ್ಮಿಕರ ಸಂಘಟನೆಯ ಬಗ್ಗೆ ಮಾತನಾಡಿದರು. ರಮೇಶ್ ಮಾತಾಡುವಾಗ, ಹಿಂದಿನ ಜನತಾ ಪ್ರಯೋಗ ದಿಂದ ಅವರಿಗೆ ಆದ ನಿರಸನ ಪ್ರಮುಖವಾಗಿ ವ್ಯಕ್ತವಾಗುತ್ತದೆ. ರೈತರ ಚಳುವಳಿಯ ಬಗ್ಗೆ ಸಾಕಷ್ಟು ಚರ್ಚೆ ನಡೆಯಿತು. ಸಭೆಯಲ್ಲಿದ್ದ ಬಹಳ ಜನ 'ಸುಂದರೇಶನ್, ರುದ್ರಪ್ಪ, ಕೊಟದ ರಾಜಕೀಯರಹಿತ ಚಳುವಳಿಯನ್ನು ಒಪ್ಪುವವರಾಗಿರಲಿಲ್ಲ. ಧಾರವಾಡದ ರಾಚಪ್ಪ ಹಡಪದ್-ಗೋಪಾಲಗೌಡರ ಕಾಲದಲ್ಲೇ-ಧಾರವಾಡದ ಹೆಬ್ಬಳ್ಳಿಯಲ್ಲಿ ನಡೆ ದಿದ್ದ ರೈತಹೋರಾಟವನ್ನು ನೆನೆಸಿಕೊಂಡರು. ಬಿ.ಆರ್. ಪಾಟೀಲರು ಶರದ್‌ಜೋಷಿ' ನಾರಾಯಣಸ್ವಾಮಿನಾಯ್ಡು ಮುಂತಾದ ಪಕ್ಷರಹಿತ ನಾಯಕರ ಬಗ್ಗೆ ಸಂಶಯ ವ್ಯಕ್ತ ಪಡಿಸಿದರು.

ಶಿಬಿರದಲ್ಲಿ ಚರ್ಚೆಯಾದ ಅನೇಕ ಸಂಗತಿಗಳು ಸಮಾಜವಾದೀ ವಿಚಾರದ ಬಗ್ಗೆ ಸಭಿಕರಲ್ಲಿ ಹೊಸ ಆಸಕ್ತಿ ಬೆಳೆಸುವಲ್ಲಿ ಸಫಲವಾದವು.

ಸಮಾರೋಪ ಸಮಾರಂಭದಲ್ಲಿ ಕೆಲವು ತಮಾಷೆಯ ಸಂಗತಿಗಳು ನಡೆದವು. ಗೆ॥ ಜೆ.ಎಚ್. ಪಟೇಲರು ಆಗತಾನೇ ಪಬ್ಲಿಕ್ ಅಂಡರ್ ಟೇಕಿಂಗ್ಸ್ ಕಮಿಟಿಯ ಪ್ರವಾಸ ಮುಗಿಸಿಕೊಂಡು ಬಂದದ್ದಕ್ಕಿರಬೇಕು ; ಟಾಟಾರ ಫ್ಯಾಕ್ಟರಿ ಲಾಭಗಳಿಸುತ್ತಿರುವುದನ್ನು, ಸರಕಾರಿ ಫ್ಯಾಕ್ಟರಿ ನಷ್ಟ ಹೊಂದುತ್ತಿರುವುದನ್ನು ನೋಡಿದರೆ, ರಾಷ್ಟ್ರೀಕರಣದ ಬಗ್ಗೆಯ ನಮ್ಮ ವಿಚಾರವೇ ಸರಿಯಿಲ್ಲವೇನೋ ಎಂದು ಸಂಶಯ ವ್ಯಕ್ತಪಡಿಸಿದರು. ಶ್ರೀಯುತರು ನಮ್ಮ ಜನರೆಲ್ಲ ಸೋಮಾರಿಗಳು ಎನ್ನುವ ತೀರ್ಮಾನಕ್ಕೆ ಬಂದಂತಿದೆ ಆದರೆ ಇದಕ್ಕಿಂತ ತಮಾಷೆಯಾಗಿದ್ದು ಕ್ಷೇತ್ರದ ಕಾಂಗ್ರೆ ಶಾಸಕ ಘಾಡಿ ಮಾಸ್ತರರ ಗೊಂದಲ. 'ಬೇಡತಿ' ವಿರುದ್ಧ ಚಳುವಳಿಗೆ ನೀವು ನಮ್ಮೊಡನೆ ಬರಬೇಕು ಎಂದು ಕ್ಷೇತ್ರದ ಜನರ ಆಗ್ರಹ, ಘಾಡಿಯವರಿಗೆ ಸಂಕಟ ; ನೀವು ಬೆಂಗಳೂರಿಗೆ ಮರಳಿ ಹೋಗಲು ಜೀಪುಹತ್ತಿ ಎಂದು ಗೆಳೆಯ ತಿಮ್ಮಪ್ಪಭಟ್ಟರು ಹೇಳುವರೆಗೆ, ಜನ ಘಾಡಿಮಾಸ್ತರರನ್ನು ಹೊರಗೆ ಹೋಗಲು ಬಿಟ್ಟಿರಲಿಲ್ಲ. ಹೆಡ್‌ಮಾಸ್ತರರರೂಮಿನಲ್ಲಿ ಕುಳಿತು ಘಾಡಿ-ಪಟೇಲರ ಹತ್ತಿರ ತಮ್ಮ ದುಃಖ ತೋಡಿಕೊಳ್ಳುತ್ತಿದ್ದರು. "ನಾನೇ ಶುರುಮಾಡಿಸಿದ ಯೋಜನೆಯ ವಿರುದ್ಧ ನಾನು ಹೇಗೆ ಪ್ರತಿಭಟನೆ ಮಾಡಲಿ ?



# ಒಳನೋಟ

## ಮಹಿಳೆ : ಸಾಮಾಜಿಕ ಜವಾಬ್ದಾರಿ

* ವಿಜಯಾರು ಬರೆಯುವುದು ಸುಶಿಕ್ಷಿತ-ಉದ್ಯೋಗಸ್ಥ ಮಹಿಳೆಯರ ಸಾಮಾಜಿಕ ಜವಾಬ್ದಾರಿಯನ್ನು ಕುರಿತು. ಸುಶಿಕ್ಷಿತ-ನಿರುದ್ಯೋಗಿ, ಹಾಗೂ ಅಸಂಖ್ಯಾತ ಅಶಿಕ್ಷಿತ ಹೆಣ್ಣುಗಳ ಸಾಮಾಜಿಕ ಜವಾಬ್ದಾರಿಯ ಕುರಿತು ವಿವೇಚಿಸ ಹೋಗದ್ದರಿಂದ ಲೇಖನದ ವ್ಯಾಪ್ತಿ ಅತ್ಯಂತ ಸೀಮಿತಗೊಂಡಿದೆ.

* "ಒಬ್ಬ ಹೆಂಗಸು ಹತ್ತು ಜನರಿಗೆ ಆಹಾರವಾದಾಳು. ಒಬ್ಬ ಗಂಡಸನ್ನ ಹತ್ತು ಜನ ಹೆಂಗಸರು ಬಂದಾಗ ಏನೂ ಮಾಡುವಂತಿಲ್ಲ. ಅದು ಅವನ ದೌರ್ಬಲ್ಯ" ಎನ್ನುವ ವಿಜಯಾ ಗಂಡಸು ಅದು ಹೇಗೆ ಇಲ್ಲಿ ದುರ್ಬಲ ಎಂದು ಸ್ಪಷ್ಟಪಡಿಸುವುದಿಲ್ಲ.

* ಪ್ರಸ್ತುತ ವ್ಯವಸ್ಥೆಯಲ್ಲಿ ನಾನಾ ವಿಧಗಳಿಂದ ಹೆಣ್ಣನ್ನು ಶೋಷಿಸುತ್ತಿರುವ ಗಂಡಿನ ಕಾರ್ಯದಿಂದ ರಕ್ಷಿಸಲೆಂದೇ ಅಲ್ಲವೆ Divorce ನಂತಹ ಕಾನೂನನ್ನು ರೂಪಿಸಿದ್ದು (ತನ್ಮೂಲಕ "ಜೀವನಾಂಶ" ಸಿಕ್ಕಲೆಂದು ?). ವಿಜಯಾರು ಅದನ್ನು ಮರೆತು ಕೇವಲ Sentimental ವಿಚಾರಗಳಿಂದ ಪ್ರಭಾವಿತರಾಗಿ Divorce ಕಾನೂನನ್ನು ಅಲ್ಲಗಳೆಯುವ ಮಾತಾಡುವಲ್ಲಿ (30ನೇ ಪುಟದ ಮೊದಲ ಪ್ಯಾರಾ) ಓದುಗರನ್ನು ಇನ್ನಷ್ಟು ಗೊಂದಲಕ್ಕೀಡು ಮಾಡುತ್ತಾರೆ. ಒಂದು ವೇಳೆ ಅವರ (ವಿಜಯಾರ) ವಿಚಾರದಂತೇ divorce ಕಾನೂನನ್ನ ತೆಗೆದುಹಾಕಿದರೆ ತನ್ನ "ಕೆಲಸ" ಪೂರೈಸಿದ ಕೂಡಲೆ ಹೆಂಡತಿಯನ್ನು ಒದ್ದೋಡಿಸುವುದು ಗಂಡಿಗೆ ಅತಿ ಸುಲಭದ ಕೆಲಸವಾಗಿ ಆಕೆಗೆ ರಕ್ಷಣೆಯೇ ಇಲ್ಲದಂತಾಗುವುದಿಲ್ಲವೇ ? ಇದು ಇಂಡಿಯಾದಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಅತಿಮುಖ್ಯವಾದುದಾಗುತ್ತದೆ.

* "ಸಮ-ಸಮನಾಗಿ ದುಡಿಯ ಬಯಸುವಿರಾದರೆ ಹೆಣ್ಣೆಂಬ ಕಾರಣಕ್ಕಾಗಿ ಯಾವ ಸವಲತ್ತೂ ಕೇಳಬೇಡಿ" ಎಂಬಂತಹ ಹೇಳಿಕೆಗಳನ್ನು ನೀಡುವಲ್ಲಿ : ಸಮಾಜದ ಗಣ್ಯ-ಸಭ್ಯರ ನಡೆ-ನುಡಿಗಳ ಬಗ್ಗೆ ತೀಕ್ಷ್ಣ ನೋಟ ಹರಿಸುವಲ್ಲಿ (ಪು. 30) ವಿಜಯಾರ ಮಾತುಗಳು ತುಂಬಾ ಅಥೆಂಟಿಕ್ ಅನ್ನಿಸಿ ನೇರವಾಗಿ ಮನಸ್ಸಿಗೆ ತಟ್ಟುತ್ತವೆ.

ಲಕ್ಷ್ಮಿ ನಾಗವೋತಿ

## ಶಿವರಾಮ ಕಾರಂತ : ವರ್ತಮಾನದಿಂದ ಭೂತಕ್ಕೆ

ನಮ್ಮಲ್ಲಿ ಅನೇಕರು ತಮ್ಮ ಸಾಹಿತ್ಯ ಕೃತಿಗಳಲ್ಲಿ ತೋರಿಕೊಳ್ಳುವ ರೂಪ ಹಾಗೂ ಬದುಕಿನಲ್ಲಿ ಕಾಣಿಸಿಕೊಳ್ಳುವ ರೂಪ-ಇವೆರಡರ ನಡುವಿನ ವೈರುಧ್ಯಗಳ ಬಗ್ಗೆ 'ಶೂದ್ರ'

ದಲ್ಲಿ ಚರ್ಚೆ ಸುರುವಾದದ್ದು, ಅದೂ ಶಿವರಾಮ ಕಾರಂತರನ್ನು ಸುತ್ತುವರೆದು, ತುಂಬ ಅರ್ಥಪೂರ್ಣ ಅನ್ನಿಸಿದೆ. ನಾವು ಹಗಲೆಲ್ಲ, ಬಳಸುವ 'ಇಂಟೆಗ್ರಿಟಿ' 'ಅಥೆಂಟಿಕ್' ಮುಂತಾದ ಪದಗಳಿಗೆ ಈ ಚರ್ಚೆ ಜೀವ ತುಂಬಬಹುದು.

ಶಿವರಾಮ ಕಾರಂತರು ತುರ್ತುಪರಿಸ್ಥಿತಿಯಲ್ಲಿ ತಮ್ಮ ಯಾವುದೋ ಪ್ರಶಸ್ತಿಯನ್ನೋ ಪದವಿಯನ್ನೋ 'ತ್ಯಾಗ'ಮಾಡಿ ಸರ್ವಾಧಿಕಾರದ ವಿರುದ್ಧ ಪ್ರತಿಭಟನೆ ವ್ಯಕ್ತಪಡಿಸಿದ್ದರು. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಾರ್ಟಿ ಪರವಾಗಿ ನಾಡಿನುದ್ದಕ್ಕೂ ಪ್ರಚಾರ ಮಾಡಿದ್ದರು. ಅನಂತರ ಅಧಿಕಾರಕ್ಕೆ ಬಂದ ಜನತಾ ಸರಕಾರ ಕಾರಂತರಿಗೆ ಅವರ 'ತ್ಯಾಗ'ಕ್ಕೆ ತಕ್ಕ ಅಥವಾ ಹೆಚ್ಚೇ ಅನ್ನಬಹುದಾದ ಪ್ರತಿಫಲವನ್ನೇ ನೀಡಿತ್ತು.

ಜನತಾ ಸರಕಾರ ಪತನ ಹೊಂದಿ ಮತ್ತೆ ಅದೇ ಸರ್ವಾಧಿಕಾರಿ ಶಕ್ತಿಗಳು ಇನ್ನೂ ಹೆಚ್ಚಿನ ಭಯಂಕರ ರೂಪದಲ್ಲಿ ನಮ್ಮೆದುರು ಈಗ ಕಾಣಿಸಿಕೊಂಡಿರುವಾಗ—ಶಿವರಾಮ ಕಾರಂತರ ಪ್ರತಿಕ್ರಿಯೆ ಏನು ? ಎಂದು ನಾನು ಪ್ರತಿನಿತ್ಯ ಪತ್ರಿಕೆಗಳಲ್ಲಿ ಹುಡುಕುತ್ತಿದ್ದೇನೆ. ನನಗೊಮ್ಮೆ "ಪ್ರಜಾವಾಣಿ"ಯಲ್ಲಿ ಸಿಕ್ಕಿದ್ದು : ಇತ್ತೀಚೆಗೆ ಭಾರತದ ರಾಜಧಾನಿಯಲ್ಲಿ ಸಂಸತ್ ಸದಸ್ಯರೊಬ್ಬರಿಂದ "ಗೂಂಡಾರಾಯ" ರೆಂದು ಹೊಗಳಿಸಿಕೊಂಡ ವ್ಯಕ್ತಿಯ ಎದುರು ಡೊಗ್ಗಾಲೂರಿ ನಿಂತು ವಿನಯ ಪ್ರದರ್ಶಿಸಿದ ನಮ್ಮ ಕಡಲತೀರದ ಭಾರ್ಗವ ! ಶಿವರಾಮ ಕಾರಂತರ ಈ ಫೋಟೋ ನೋಡಿ ನನಗೆ ತುಂಬಾ ಹೇಸಿಕೆ ಅನಿಸಿತು.

ಇದೇಕೆ ಹೀಗೆ ? —ಅಂತ ಚಿಂತಿಸುವಾಗ ಉಡುಪಿಯಲ್ಲಿ ಕು.ಶಿ. ಹರಿದಾಸ ಭಟ್ಟರು ನಡೆಸಿದ್ದ ಒಂದು ಸೆಮಿನಾರಿನ ನೆನಪಾಗುತ್ತದೆ. ರಂಗಭೂಮಿ ಚಳುವಳಿಗೆ ಸಂಬಂಧಿಸಿದ್ದು. ಜಿ.ಬಿ. ಜೋಶಿಯವರು ನಡೆಸಬೇಕಾಗಿದ್ದ ಗೋಷ್ಠಿಯನ್ನು ಕೊನೆಗಳಿಗೆಯಲ್ಲಿ ಶಿವರಾಮ ಕಾರಂತರಿಗೆ ಕೊಟ್ಟರು. ಅವರು ಏನು ಮಾಡಿದರು ಗೊತ್ತೆ ? ಗೋಷ್ಠಿಯನ್ನು ಪಾಲುಗೊಂಡವರಿಗೆ "ಒಬ್ಬೊಬ್ಬರಿಗೆ ಕೇವಲ ೫-೫ ಮಿನಿಟು ಕೊಟ್ಟು", "ಪಾಳಿಯ ಪ್ರಕಾರ" ವಿಚಾರ ಮಂಡಿಸಲು ಹೇಳಿದರು. ನಮ್ಮ ಚೆಡ್ಡೀ ಬಾಂಧವರ ಸರಸಂಚಾಲಕನಿಗೂ ಅಷ್ಟು "ಶಿಸ್ತಿ"ನಿಂದ ನಡೆಸಲು ಸಾಧ್ಯವಾಗುತ್ತಿರಲಿಲ್ಲ !

ಇಂಥ ಅನೇಕ "ಮುಖ"ಗಳ ಶಿವರಾಮ ಕಾರಂತರು "ಎಲ್ಲಾ ತಿಳಿದ ಎಲ್ಲಪ್ಪ"ನ ಹಾಗೆ ವರ್ತಿಸುವುದು ಅಚ್ಚರಿಯಲ್ಲ (ಇಂಥವರೇ ಇನ್ನೊಬ್ಬರು ಶ್ರೀರಂಗರು). ಇಂಥವರಿಗೊಂದು ಭ್ರಮೆ ಇರುತ್ತದೆ ; ಎಲ್ಲ ಕ್ರಾಂತಿಗಳೂ, ಬಂಡಾಯಗಳೂ ತಮ್ಮೊಂದಿಗೇ ಮುಗಿದುಹೋದವು-ಎಂದು. ಇಂಥವರಿಗೆ ಹೊಸ ಪೀಳಿಗೆಯ ಆಶಯಗಳು ಅರ್ಥವಾಗುವುದಿಲ್ಲ. ತಮ್ಮನ್ನು ಮೀರಿದ ಬದುಕು ಅರ್ಥವಾಗುವುದಿಲ್ಲ. ಜೀವಂತವಾಗಿ ಬದುಕಿದ್ದರೂ ಆ ಬದುಕಿಗೇ ಪರಕೀಯರಾಗುತ್ತ, irrelevant ಆಗುತ್ತ, ವರ್ತಮಾನದ ಕೊಂಡಿ ಕಳಚಿಕೊಳ್ಳುತ್ತ, ಭೂತದ ಸೊತ್ತಾಗುತ್ತಾರೆ ; ಕೊನೆಗೆ ಭೂತವಾಗುತ್ತಾರೆ, ಅಷ್ಟೆ.

**ಚಂದ್ರಶೇಖರ ಪಾಟೀಲ**

# ರೈತರ ಸಮಸ್ಯೆಗಳ ಪರಿಹಾರ

## ಕರ್ನಾಟಕ ಸರ್ಕಾರದ ದಿಟ್ಟ ಹೆಜ್ಜೆ

ನೀರಾವರಿ ಜಮೀನಿಗೆ ವಿಧಿಸಲಾಗುತ್ತಿದ್ದ ಅಭಿವೃದ್ಧಿ ತೆರಿಗೆ ರದ್ದು (ಬೆಟರ್ ಮೆಂಟ್ ಲೆವಿ)

ನೀರಾವರಿ ತೆರಿಗೆಯ ಗಣನೀಯ ಇಳಿಮುಖ.

ಸಾಲ ನೀಡಿಕೆಗಾಗಿ ರೈತರಿಂದ ಬಂದ ಅರ್ಜಿಗಳನ್ನು 45 ದಿನಗಳೊಳಗೆ ಇತ್ಯರ್ಥ ಮಾಡಲಾಗುವುದು.

1970ರ ಬರಗಾಲದಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ನೀಡಿದ್ದ ಮೂಲ ಸಾಲದ (ಸೀಡ್ ಲೋನ್) ಮರುಪಾವತಿ ರದ್ದು.

ಸಣ್ಣ ಮತ್ತು ಅತಿ ಸಣ್ಣ ರೈತರಿಂದ ಸಹಕಾರಿ ಸಾಲದ ವಸೂಲಿಯನ್ನು 1981ರ ಜನವರಿ ಅಂತ್ಯದವರೆವಿಗೆ ತಡೆಹಿಡಿಯಲಾಗಿದೆ.

ಒಂದು ಕೋಟಿ ರೂ ವೆಚ್ಚದಲ್ಲಿ ನೀರಾವರಿ ಕಾಲುವೆಗಳ ಹಾಗೂ ಅಚ್ಚುಕಟ್ಟು ಪ್ರದೇಶದ ರಸ್ತೆಗಳ ದುರಸ್ತಿ.

**ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆಯ**

**ಪ್ರಕಟಣೆ**

